

ಕರ್ನಾಟಕ
# ಸ್ಕೌಟ್ ಮತ್ತು ಗೈಡ್
ವಾರ್ತಾ ಪತ್ರಿಕೆ
# Karnataka Scout & Guide
News Magazine

VOL. - 6 AUGUST - 2006 No. - 07







Shri **T.N. CHATURVEDI**, His Excellency the Governor of Karnataka, Releasing **" Girl Guide Margadarshi "** on 3-8-2006 at Raj Bhavan. Shri **BASAVARAJ HORATTI,** Hon'ble Minister for Primary & Secondary Education, Shri Kondajji B. Shanmukhappa, State Chief Commissioner are also seen.





Shri **T.N. CHATURVEDI**, His Excellency the Governor of Karnataka, presenting the Certificates to a Cub, Bulbul, Scout, Guide, Rover and Ranger on 3rd August 2006 at Glass House, Raj Bhavan, Bangalore. Shri **BASAVARAJ HORATTI,** Hon'ble Minister for Primary & Secondary Education, is also seen.

# RAJYAPURASKAR RALLY AWARDS PROGRAMME at Rajya Bhavan on 3rd August 2006




His Excellency Sri T.N. Chaturvedi Presented " RAJYAPURASKAR AND VETERANS AWARDS" at Raj Bhavan on 3 August 2006 Sri Basavaraj Horatti, Hon'ble Minister for Primary and Secondary Education, Sri Kondajji B. Shanmukhappa, State Chief Commissioner, Smt. Saroja Tulsidas Dasappa, S.C. (G), Sri Mohammed Zahiruddin S.C.(S) are seen.



Smt. Gowri S. Trivedi, I.A.S. Secretary to Governor of Karnataka, Sri C.H. Govinda Bhat, I.A.S., Secretary to Govt., Dept. of Youth Services & Sports and Sri R.L. Patil, Joint Director, Dept. of Youth Services & Officials of Raj Bhavan are seen.




His Excellency the Governor of Karnataka Sri T.N. Chaturvedi, Sri Basavaraj Horatti, Hon'ble Minister SCC, SC(S), SC(G), JSS(G) are seen with State Awardees at Raj Bhavan on 3rd August 2006.



A view of the Invitees, Scout / Guide Officials, Unit Leaders & Parents at Glass House, Raj Bhavan on 3rd August 2006 at the Presentation of the Rajyapuraskar Award Function.

ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
Karnataka Scout & Guide
News Magazine

Vol - 6 August - 2006 No. 7



## ಪರಿವಿಡಿ

# ರಾಜ್ಯ ಮುಖ್ಯ ಆಯುಕ್ತರ ನುಡಿ.............................. 

**ಮಾನ್ಯರೆ**

ವಿಶ್ವ ಸ್ಕೌಟ್ ಸಂಸ್ಥೆಯು ಮುಂದಿನ ಜುಲೈ-ಆಗಸ್ಟ್ 2007ರಲ್ಲಿ ಲಂಡನ್ ಸಮೀಪ ಜರಗುವ ಸ್ಕೌಟ್ ಶತಮಾನೋತ್ಸವ ಜಾಂಬೋರಿ ಬಗ್ಗೆ ಸಕಲ ಸಿದ್ದತೆ ಮಾಡುತ್ತಿದ್ದಾರೆ. 2007ಕ್ಕೆ ಹಿಂದಿನ ಮೈಸೂರು ಸಂಸ್ಥಾನದಲ್ಲಿ ಸ್ಕೌಟ್ ಚಳವಳಿ ಸ್ಥಾಪನೆಯಾಗಿ 90 ವರ್ಷಗಳಾಗುತ್ತದೆ. 1917, ಅಕ್ಟೋಬರ್ 3 ರಂದು ಅಂದಿನ ಸರ್ಕಾರದ ಆಜ್ಞೆಯಂತೆ ಸ್ಕೌಟ್ ಚಳವಳಿಯನ್ನು ಸ್ಥಾಪಿಸಲು ನಾಂದಿ ಹಾಕಲಾಯಿತು. ರಾಜ್ಯದ ಹೆಚ್ಚಿನ ಸ್ಕೌಟ್ಸ್-ಗೈಡ್ಸ್‌ಗಳು, ಕಾರ್ಯಕರ್ತರುಗಳು, ಶತಮಾನೋತ್ಸವ ಜಾಂಬೋರಿಯಲ್ಲಿ ಭಾಗವಹಿಸಲು ಸಿದ್ಧರಾಗಿರುವುದು ಶುಭ ಸೂಚನೆ. ರಾಜ್ಯ ಹಾಗೂ ರಾಷ್ಟ್ರದಲ್ಲಿ ಇಂದಿಗೂ ಹೆಚ್ಚಿನ ಯುವ ಜನತೆಯನ್ನು ಆಕರ್ಷಿಸುತ್ತಿರುವ ಏಕೈಕ ಯುವ ಚಳವಳಿ ಸ್ಕೌಟ್-ಗೈಡ್ ಸಂಸ್ಥೆ. ರಾಜ್ಯ ಸಂಸ್ಥೆ ಶತಮಾನೋತ್ಸವ ಸ್ಕೌಟ್ ಚಳವಳಿ ಆಚರಣೆಗಾಗಿಯೇ ಒಂದು ಉಪಸಮಿತಿ ರಚಿಸಿದ್ದು, ಹಿರಿಯ ತರಬೇತುದಾರರೂ, ರಾಷ್ಟ್ರೀಯ ಸಂಸ್ಥೆಯಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರಾಗಿದ್ದ ಶ್ರೀ ಟಿ.ಎಸ್. ಲೂಕಾಸ್ ಅಧ್ಯಕ್ಷತೆಯಲ್ಲಿ ರಚಿಸಿದ್ದು, ಈಗಾಗಲೇ ಒಂದು ಬಾರಿ ಉಪಸಮಿತಿ ಸಭೆ ಸೇರಿ ಹಲವಾರು ಉಪಯುಕ್ತ ಸಲಹೆಗಳನ್ನು ನೀಡಿದ್ದಾರೆ. ಇವುಗಳನ್ನು ಎಲ್ಲಾ ಜಿಲ್ಲಾ ಸಂಸ್ಥೆಗಳಿಗೆ ಸದ್ಯದಲ್ಲಿಯೇ ಕಳುಹಿಸಲಾಗುವುದು. ಘಟಕಗಳು, ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳು ತಮ್ಮ ಹಂತದಲ್ಲಿ ಪ್ರತ್ಯೇಕ ಕಾರ್ಯಕ್ರಮಗಳನ್ನು ಹಾಕಿಕೊಂಡು ತಮ್ಮಗಳ ವ್ಯಾಪ್ತಿಯಲ್ಲಿ ಹೆಚ್ಚಿನ ಆದ್ಯತೆ ನೀಡಬೇಕೆಂದು ಪ್ರಾರ್ಥಿಸುತ್ತೇನೆ.

3 ಆಗಸ್ಟ್ 2008 ರಂದು ರಾಜಭವನದಲ್ಲಿ ಜರುಗಿದ ರಾಜ್ಯ ಪುರಸ್ಕಾರ ಪ್ರಶಸ್ತಿ ಪ್ರಧಾನ ಹಾಗೂ ಹಿರಿಯ ಸ್ಕೌಟರ್-ಗೈಡರ್, ಸ್ಥಳೀಯ ಸಂಸ್ಥೆಗಳು ಹಾಗೂ ಮುಕ್ತ ದಳಗಳಿಗೆ ಸನ್ಮಾನ ಸಮಾರಂಭ ಅತ್ಯಂತ ಯಶಸ್ವಿಯಾಗಿ ಜರುಗಿತು. ಘನತೆವೆತ್ತ ಗೌರವಅನ್ವಿತ ರಾಜ್ಯಪಾಲರಾದ ಶ್ರೀ ಟಿ.ಎನ್. ಚತುರ್ವೇದಿಯವರು ಎರಡು ಗಂಟೆಗಳ ಕಾಲ ಜರುಗಿದ ಸುಂದರ-ಸರಳ ಸಮಾರಂಭದಲ್ಲಿ ಹಾಜರಿದ್ದು. ಸ್ಕೌಟ್-ಗೈಡ್ ಚಳವಳಿ ಇನ್ನೂ ಸದೃಢವಾಗಿ ಬೆಳೆಯಲು ಸಾರ್ವಜನಿಕ ಶಿಕ್ಷಣ ಇಲಾಖೆ, ಯುವಜನ ಸೇವಾ ಇಲಾಖೆ, ಸರ್ಕಾರ ಹಾಗೂ ಸರ್ಕಾರೇತರ ಸಂಘ, ಸಂಸ್ಥೆಗಳು ಹೆಚ್ಚು ಗಮನಹರಿಸಬೇಕೆಂದು ಕರೆಯಿತ್ತರು. ಅಲ್ಲದೆ, ಹಿಂದೆಂದಿಗಿಂತಲೂ ಇಂದು, ಪ್ರಪಂಚದೆಲ್ಲೆಡೆ ಇರುವ ಪರಿಸ್ಥಿತಿಯಲ್ಲಿ ಸ್ಕೌಟ್-ಗೈಡ್ ಚಳವಳಿಯ ಉದ್ದೇಶ-ದ್ಯೇಯಧೋರಣೆಗಳು ಹೆಚ್ಚು ಯುವಜನತೆಯನ್ನು ಆಕರ್ಷಿಸುವಂತಾಗಲೆಂದು ಹಾರೈಸಿದರು. ಚಳವಳಿಯ ನಿಯಮಗಳಾದ ಶಿಸ್ತು, ಪ್ರಾಮಾಣಿಕತೆ, ಸೇವಾಮನೋಭಾವ, ಸಾಹಸಪ್ರಿಯತೆ, ಕ್ರಿಯಾಶೀಲತೆ, ಸಚ್ಚಾರಿತ್ರ್ಯ, ಜೀವನ ಕೌಶಲ್ಯ ಮತ್ತು ಉತ್ತಮ ಮೌಲ್ಯಗಳು ಇಂದು ಹೆಚ್ಚು ಅವಶ್ಯಕತೆ ಇದೆ ಎಂದರು.

ಅತ್ಯುತ್ತಮವಾಗಿ ನೃತ್ಯ ಪ್ರದರ್ಶನ ನೀಡಿದ ಮೈಸೂರು ನಗರ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆ ಹಾರೋಹಳ್ಳಿ ಶಾಲೆಗಳ ಸ್ಕೌಟ್ಸ್-ಗೈಡ್ಸ್ ತಂಡಗಳಿಗೆ ಮೆಚ್ಚುಗೆಯ ಕೊಡುಗೆಯಾಗಿ ರೂ. 750/-ಗಳನ್ನು ಎರಡೂ ತಂಡಗಳಿಗೆ ನೀಡಲಾಯಿತು. ಇದು ನಿಜಕ್ಕೂ ಸಂಸ್ಥೆಗೆ ಹೆಮ್ಮೆ ಹಾಗೂ ಗೌರವದ ವಿಷಯ. ಸಮಾರಂಭದಲ್ಲಿ ಅತಿಥಿಗಳಾಗಿ ಭಾಗವಹಿಸಿದ ಸನ್ಮಾನ್ಯ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಚಿವರಾದ ಶ್ರೀ ಬಸವರಾಜು ಹೊರಟ್ಟಿಯವರು ಚಳವಳಿ ರಾಜ್ಯದ ಎಲ್ಲಾ ಶಾಲೆಗಳಲ್ಲಿ ಪ್ರಾರಂಭಿಸಲು ತಮ್ಮ ಸರ್ಕಾರ ಎಲ್ಲ ಸಹಾಯ, ನೆರವು ನೀಡಲು ಸಿದ್ಧ ಎಂದು ಘೋಷಿಸಿದರು, ರಾಜ್ಯ ಮುಖ್ಯ ಆಯುಕ್ತರ ಮನವಿಯನ್ನು ಪುರಸ್ಕರಿಸಿ ಸ್ಕೌಟ್-ಗೈಡ್ ಚಳವಳಿಗೆ ಸೇರುವ ಅರ್ಹ ವಿದ್ಯಾರ್ಥಿಗಳಿಗೆ 20,000 ಸಾವಿರ ಸ್ಕೌಟ್-ಗೈಡ್ ಸಮವಸ್ತ್ರ ತಯಾರಿಸಲು ರೂ. 54 ಲಕ್ಷಗಳ ವಿಶೇಷ ಅನುದಾನ ನೀಡುವುದಾಗಿ ಆಶ್ವಾಸನೆ ನೀಡಿದರು. ಸಂಸ್ಥೆಯ ಹಿತೈಷಿಗಳು, "ರಾಜ ಭವನದ" ಕಾರ್ಯಕರ್ತರುಗಳು, ಸರ್ಕಾರ ಹಾಗೂ ರಾಜ್ಯಭವನದ ಹಿರಿಯ ಅಧಿಕಾರಿಗಳು, ಮಾಧ್ಯಮದವರು, ಸ್ಕೌಟ್ಸ್-ಗೈಡ್ಸ್, ಕಬ್-ಬುಲ್‌ಬುಲ್ಸ್, ರೋವರ್ಸ್-ರೇಂಜರ್ಸ್ ಹಾಗೂ ಪೋಷಕರುಗಳು ಹಾಗೂ ಶಿಕ್ಷಣ ಸಂಸ್ಥೆಯ ಮುಖ್ಯಸ್ಥರುಗಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಪ್ರಶಸ್ತಿ ಪ್ರಧಾನ ಸಮಾರಂಭದ ಯಶಸ್ವಿಗೆ ಕಾರಣಕರ್ತರಾದರು.

ಪ್ರತಿ ವರ್ಷ ರಾಜ್ಯಭವನದಲ್ಲಿ ರಾಜ್ಯಪುರಸ್ಕಾರ ಕಾರ್ಯಕ್ರಮ ಜರುಗಲು ಅವಕಾಶ ನೀಡಿ ಪದಕ ಪ್ರಶಸ್ತಿಗಳನ್ನು ವಿತರಿಸಿ - ಚಳವಳಿ ರಾಜ್ಯದೆಲ್ಲೆಡೆ ಹೆಚ್ಚಾಗಿ ಬೆಳಯಬೇಕೆಂದು ಸಂದೇಶ ನೀಡುತ್ತಿರುವ ಗೌರವಾನ್ವಿತ ರಾಜ್ಯಪಾಲರಿಗೆ ಹಾಗೂ ರಾಜಭವನದ ಎಲ್ಲಾ ಅಧಿಕಾರಿ ವರ್ಗದವರಿಗೆ ರಾಜ್ಯ ಸಂಸ್ಥೆ ಹಾಗೂ ಜಿಲ್ಲಾ ಸಂಸ್ಥೆಗಳ ಪರವಾಗಿ ಹೃತ್ಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಈ ತಿಂಗಳ 5 ರಿಂದ 7ರ ವರೆವಿಗೆ ನವದೆಹಲಿಯ ಇಂಡಿಯನ್ ಸ್ಕೌಟ್-ಗೈಡ್ ಫೆಲೋಷಿಪ್‌ನವರು ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರದಲ್ಲಿ ಸಮಾವೇಶ ಜರುಗಿಸಿದ್ದಲ್ಲದೆ, ಭಾರತದಲ್ಲೇ ಪ್ರಥಮವಾಗಿ 1909ರಲ್ಲಿ ಬೆಂಗಳೂರಿನಲ್ಲಿ "ಸ್ಕೌಟ್ ಘಟಕ" ಪ್ರಾರಂಭಿಸಲ್ಪಟ್ಟ ಬಿಷಪ್ ಕಾಟನ್ ಶಾಲೆಯಲ್ಲಿ ದಿನಾಂಕ 7 ಆಗಸ್ಟ್‌ರಂದು ಸ್ಕೌಟ್ ಶತಮಾನೋತ್ಸವಕ್ಕೆ ನಾಂದಿಯಾಗಿ ಕಾರ್ಯಕ್ರಮ ಏರ್ಪಡಿಸಿದ್ದರು. ಹಲವಾರು ರಾಜ್ಯಗಳಿಂದ 45 ಸದಸ್ಯರುಗಳು ಸಮಾವೇಶದಲ್ಲಿ ಭಾಗವಹಿಸಿದರು. ಫಿಲೋಷಿಪ್‌ನ ರಾಷ್ಟ್ರೀಯ ಕಾರ್ಯಕಾರಿ ಅಧ್ಯಕ್ಷರಾದ ಶ್ರೀ ವಿ. ರಾಜಾರಾಮನ್, ರಾಷ್ಟ್ರೀಯ ಸಂಸ್ಥೆಯ ಕಾನೂನು ಸಲಹೆಗಾರರಾದ ಶ್ರೀ ಡಿ.ಎಸ್. ಮಹಾಜನ್ ಸಂಸ್ಥೆಯ ವಿವಿದ ಹಂತದ ಪದಾಧಿಕಾರಿಗಳು ಭಾಗವಹಿಸಿದ್ದರು. ಸಂಸ್ಥೆಯ ರಾಷ್ಟ್ರೀಯ ಜಂಟಿ ಕಾರ್ಯಾದರ್ಶಿಯಾದ ಶ್ರೀ ಎಂ.ಎ.ಸಿ. ಮೆಕ್ಕಿ ಸಮಾವೇಶದ ಯಶಸ್ಸಿಗೆ ಸಾಕಷ್ಟು ಶ್ರಮವಹಿಸಿ ಕಾರ್ಯನಿರ್ವಹಿಸಿದರು. ಸಮಾವೇಶದ ವರದಿಯನ್ನು ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ.

15 ಆಗಸ್ಟ್ 2007 ರಂದು 60ನೇ ಸ್ವಾತಂತ್ರ ದಿನಾಚರಣೆಯನ್ನು ರಾಷ್ಟ್ರದೆಲ್ಲೆಡೆ ಆಚರಿಸಲಾಗಿದ್ದು, ಹಲವಾರು ಜಿಲ್ಲೆಗಳಲ್ಲಿ ಸ್ಕೌಟ್-ಗೈಡ್ ತಂಡಗಳಿಗೆ ಪಥಸಂಚಲನಕ್ಕೆ ಬಹುಮಾನ, ಪ್ರಶಸ್ತಿಗಳು ದೊರಕಿರುತ್ತದೆ. ಸಂಬಂಧ ಪಟ್ಟ ಎಲ್ಲಾ ಜಿಲ್ಲಾ ಸಂಸ್ಥೆಗಳಿಗೆ. ಹಾರ್ದಿಕ ಅಭಿನಂದನೆಗಳು.

ಸಾಕಷ್ಟು ತರಬೇತಿಗಳು, ಕಾರ್ಯಕ್ರಮಗಳು ಚಟುವಟಿಕೆಗಳು, ರ್‍ಯಾಲಿಗಳು, ಸಮಾವೇಶಗಳು ರಾಜ್ಯದೆಲ್ಲೆಡೆ ಜರುಗುತ್ತಿರುವ ಬಗ್ಗೆ ಪ್ರತಿದಿನ ರಾಜ್ಯ ಸಂಸ್ಥೆಗೆ ವರದಿಗಳು ಬರುತ್ತಿದ್ದರೂ, ಇನ್ನೂ ಹಲವಾರು ಘಟಕಗಳು, ಮುಕ್ತದಳಗಳು, ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳು ತಮ್ಮ ಕಾರ್ಯ ಚಟುವಟಿಕೆಗಳನ್ನು ಹೆಚ್ಚು ಗೊಳಿಸುವತ್ತ ಗಮನ ನೀಡಬೇಕೆಂದು ಸಂಬಂಧಪಟ್ಟ ಎಲ್ಲಾ ಕಾರ್ಯಕರ್ತರುಗಳು ಹಾಗೂ ಪದಾಧಿಕಾರಿಗಳಲ್ಲಿ ನನ್ನ ಪ್ರಾರ್ಥನೆ.

ಹಲವು ಜಿಲ್ಲೆಗಳಲ್ಲಿ ತರಬೇತಿ ಪಡೆದ ನಾಯಕರುಗಳು ಸಂಖ್ಯೆ ಅತ್ಯಲ್ಪವಾಗಿದ್ದು, ತರಬೇತಿ ಶಿಬಿರಗಳನ್ನು ನಡೆಸುವಾಗ ಜಿಲ್ಲೆಗಳಿಗೆ ಆಗುವ ತೊಂದರೆಗಳ ಬಗ್ಗೆ ನಾನು ಈಗಾಗಲೇ ಸಂಬಂಧಪಟ್ಟವರ ಗಮನ ಸೆಳೆದಿದ್ದೇನೆ. ಹೆಚ್ಚಿನ ತರಬೇತಿಗೆ ಅರ್ಹರಿರುವ ಎಲ್ಲಾ ಜಿಲ್ಲೆಗಳ ಸಹೋದ್ಯೋಗಿಗಳಿಗೆ ನನ್ನ ಮನವಿ, ದಯಮಾಡಿ ಹೆಚ್ಚಿನ ತರಬೇತಿ ಪಡೆದು ಎ.ಎಲ್.ಟಿ.-ಎಲ್.ಟಿ. ಪದಕ ಪಡೆದು ತಮ್ಮ ಜಿಲ್ಲೆಗಳಲ್ಲಿ ತರಬೇತಿ ವಿಭಾಗವನ್ನು ಬಲಪಡಿಸಬೇಕೆಂದು ಕೋರುತ್ತೇನೆ. ಅಲ್ಲದೆ ತಾವುಗಳು ಕೂಡ ರಾಷ್ಟ್ರೀಯ ಸಂಸ್ಥೆಯ ತರಬೇತುದಾರರಲ್ಲಿ ಒಬ್ಬರಾಗಿ ರಾಜ್ಯ ಹಾಗೂ ರಾಷ್ಟ್ರದೆಲ್ಲೆಡೆ ತರಬೇತಿ ನೀಡಲು ಅವಕಾಶ ಪಡೆಯಿರಿ ಎಂದು ಆಶಿಸುತ್ತೇನೆ.

ಚಳವಳಿಯ ಎಲ್ಲಾ ಹಂತದ ಕಾರ್ಯಕರ್ತರುಗಳಿಗೆ, ಪದಾಧಿಕಾರಿಗಳಿಗೆ 60ನೇ ವರ್ಷದ ಸ್ವಾತಂತ್ರ ದಿನಾಚರಣೆಯ ಹಾರ್ದಿಕ ಶುಭಾಶಯಗಳು.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

# GOVERNOR PRESENTS RAJYAPURASKAR AWARDS
## TO SCOUTS AND GUIDES OF KARNATAKA

His Excellency the Governor of Karnataka Sri. T.N. CHATURVEDI, presented the Chathurtha Charan Awards for Cubs, Heerak Pankh Awards to Bulbuls Rajyapuraskar Awards to Scouts and Guides, Nipun Awards to Rovers and Ranger at State Level Special Function held at the Glass House, Raj Bhavan, Bangalore on 3rd August 2006.

858 Cubs, 1090 Bulbuls, 2048 Scouts, 1516 Guides, 18 Rovers and 8 Rangers have qualified and received the Awards during the year 2005. Selected Cubs Bulbuls, Scouts, Guides, Rovers and Rangers from each District received the Awards on behalf of all the participants from the Districts. More than 500 Awardees attended the Colourful Function held at Glass House, Raj Bhavan.

As part of this Programme Children from St. Rita Higher Primary School, Mysore and Pragathi Vidya Nikethan School, Horohally, Bangalore Rural presented an Enchanting Cultural Programme.

Sri. BASAVARAJ HORATTI, Hon'ble Minister for Primary and Secondary Education, Govt. of Karnataka was the Guest of Honour, Smt. Gowri S. Trivedi, Secretary to Governor, Sri. C.H. Govinda Bhat, I.A.S., Secretary to Government, Dept. of Youth Services and Sports and others senior Officials of Raj Bhavan were present on this Occasion.

Sri. C.R. Mohamed Zahiruddin, Smt. Saroja Tulasidas Dasappa, State Commissioners, Sri. T. Prabhakar, State Treasurer, Sri. R.L. Patil, Joint Director, Dept. of Youth Services and Officials of SHQ, DHQ, Parents, Well wishers of the Movement were present on this Occasion.

Sri. Kondajji B. Shanmukhappa , State Chief Commissioner, in his welcome address, requested the Govt. of Karnataka to extend all Support and help to the Bharat Scouts and Guides to grow in Rural areas with the help of Department of Public Instruction, Department of Youth Services & Sports and other Democratic Bodies like Gram Panchayat, Taluk Panchayat and Zilla Panchayat. He said the Movement will Celebrate its Centenary of Scouting during the first week of August 2007 all over the World. Smt. Geetha Nataraj, Joint State Secretary Proposed vote of Thanks.

# GOVERNOR APPEALED TO PUBLIC FROM DIFFERENT SECTIONS OF SOCIETY TO SUPPORT SCOUTS & GUIDES MOVEMENT



"I have the privilege of presenting today different Prestigious Awards of the Bharat Scouts and Guides to the qualified Cubs, Bulbuls, Scouts, Guides, Rovers and Rangers. I am very happy to know that Veteran Scouters and Guiders who are the backbone of this Great Movement and have been working hard to trainup the youngsters are also being honoured with awards today".

Sri. T.N. Chaturvedi the Governor said "The largest Uniformed Voluntary Youth Movement, the Bharat Scouts and Guides was promoted by Visionaries, Educationists and Stalwarts. They looked for ahead of times, guided, popularized and laid a strong foundation to the growth of this Movement, as a complement to education and educational Activity".

"As you know, Scouting and Guiding symbolize Education for Life, Learning by Doing, Adventure, Social Service and Love for the Motherland. The Youth Movement, Founded by Lord Baden Powell in 1907, has now spread in more than 216 countries of the World with more than 250 million Scouts & Guides".

"I am sure, the Movement would take strong roots in the State and every school would be covered by at least One Unit of Cub/Bulbul, Scout/Guide. The value based Movement that aims at Promoting a Spirit of Patriotism, Selfless Service to the Humanity and Discipline, should cover the Maximum number of young boys and girls of our country to make our country a Strong Nation".

He also said that there is a need to bridge the discrimination gap between

Rural and Urban Children. The Scouts & Guides Movement has to be carried to the Rural Areas of the State and in the Cities, it should be spread in the slums and to sections where deprived people live and also should reach every Taluk and District to help youngsters to enlighten and create a productive society. The Governor opined that in this "Suvarna Karnataka Year", special efforts should be made in the field of education and for Agricultural Development.

Lauding the work of the Bharat Scouts and Guides in helping to instill a sense of brotherhood among the youth, he said such Organisations helped in building a harmonious and peace-loving society and joining Scouts & Guides was the best way to instill a sense of Discipline, Camaraderie and Equality amongst the Youth.

Expressing his approval of the Grant that Sri. Basavaraj Horatti, Minister for Primary and Secondary Education had sanctioned, the Governor urged the Minister for Youth Services and Sports also to come forth and Support this cause.

Earlier, the Governor released the maiden issue of "Girl Guide Margadarshi", a Book in Kannada.

## DIVISION WISE STATE AWARDS FOR BEST LOCAL ASSOCIATION, OPEN UNITS, VETERAN SCOUTERS & GUIDERS PRESENTED AT RAJBHAVAN ON 3RD AUGUST 2006

His Excellency the Governor of Karnataka presented "Kondajji B. Shanmukhappa Endowment Fund Awards" for the year 2005 at Raj Bhavan, Bangalore on 3rd August 2006.

These State Awards have been constituted to recognise the Best Local Association, Best Open Unit, Veteran Scouter and Veteran Guider of Each Division. The details of the Awards presented on 3.8.2006 are mentioned on page no.__

His Excellency Sri. T.N. Chaturvedi, the Governor of Karnataka, Sri. Basavaraj Horatti, Hon'ble Minister for Primary and Secondary Education Honoured them with Memento, Shawl, Garland and a Certificate.

# SPECIAL GRANT OF Rs.54 LAKHS TO SCOUT/GUIDE UNIFORMS FOR SCOUTS AND GUIDES IN KARNATAKA

- BASAVARAJ HORATTI



Sri. Basavaraj Horatti, Hon'ble Minister for Primary and Secondary Education, Govt.of Karnataka announced a Special Grant of Rs.54 lakhs to the Bharat Scouts and Guides, Karnataka to provide 20 thousand Scout / Guide Uniforms for Rural Scouts & Guides. The Hon'ble Minister made this announcement at the Annual Rajyapuraskar Award Ceremony held at Raj Bhavan on 3rd August 2006.

He stressed the need for Discipline among school children and everyone's life. He said that The Scouts & Guides is the largest Uniformed Movement in the State and instilled a sense of discipline, camaraderie and fellow feeling. He also told that With a view to bring about equality among school children, the Government had distributed Uniforms worth Rs.60 Crores, so that there was no discrimination between rich and poor students.

The Minister in his address as a Guest of Honour said that the Govt.of Karnataka will extend all Support and Encouragement to introduce Scouting and Guiding in every school all over the State.

He desired that Office bearers of Scout / Guide Movement should Prepare a Plan of Action for vigourously Spreading the activities of the Movement in all the Schools of the State.

# RAJYAPURASKAR RALLY HELD AT SHANTHI GRUHA

A Rally of Rajyapuraskar Scouts and Guides was held at Shanthi Gruha Camping Centre, Bangalore on 3rd August 2006. Chathurtha Charan Cubs, Heerak Pankh Bulbuls, Nipun Rovers and Rangers also attended the Rally. 500 Cubs, Bulbuls, Scouts, Guides, Rovers and Rangers along with their Unit Leaders from all over the State participated in the State Level one day Rally.

This is a State Level Event held on the Occasion of the presentation of Awards Ceremony held at Raj Bhavan on 3rd August 2006 at 3.30 PM. Sri. K. Thimmappa, Smt. P. Saroja, Mrs. Ravi Wesley, Headquarters Commissioners, Sri.Narayana Setty, Smt. Janaki Venugopal, State Org. Commissioners Co-ordinated the Programme Supported by Sri. Madhav Singh and Smt. K.K. Leela, State Training Commissioners.

## Why Jamboree?

*" The Jamboree has taught us that if we exercise mutual forbearance and give & take, then there is Sympathy and Harmony "*




*" The meaning of Jamboree is togetherness - so we need to bring all the countries together and make them as one "*

- Baden Powell

## Kondajji B. Shanmukhappa Endowment Fund Awards for the year 2005

**Sri. T.N. Chaturvedi,** His Excellency the Governor of Karnataka Presented these State Awards to the following on 3rd August 2006 at Raj Bhavan, Bangalore.

| Sl.No | Division | Best Local Association | Best Open Unit | Best Scouter | Best Guider |
|---|---|---|---|---|---|
| 1. | Bangalaore Division | Jayanagar Local Association Bangalore South | Nethaji Open Unit Davanagere | Sri. Pathalingaiah Tumkur | Smt Rathna Chitradurga |
| 2. | Mysore Division | Mangalore Local Association D.K. District | Kunda Open Unit Udupi | Sri. P.A. Iyyanna Siddapura Kodagu | Mrs. Shantha Giriyanna Mysore |
| 3. | Belgaum Division | Gokak Local Association Belgaum District | Swami Vivekananda Open Unit, Bijapur | Sri B.K. Patil Dharwar | Smt. Uma Mari Kenchannanavar Haveri |
| 4. | Gulbarga Division | Hadagali Local Association Bellary District | " ——— " | Sri. Abdual Afeez Bidar | Smt. Shylashree Raichur |

FLASH NEWS

## 100 CENTENARY YEAR OF SCOUT MOVEMENT 2007

### SPECIAL NATIONAL JAMBOREE 2007 AT RAJARHAT KALKOTA.

*Organise : The Bharat Scouts & Guides, NHQ, New Delhi.*
*Host : West Bengal State Bharat Scouts and Guides, Kolkata.*
*Date : 2nd to 7th January 2007*
*Place : Rajarhat, Kolkata (2nd Kolkata Township) (Near Bidhannagar, Salt lake City)*

*Await Detailed Circular from State Headquarters, Bangalore regarding Quota allotment for Districts and other Information.*

***State Secretary***

# ಬೆಂಗಳೂರು ವಿಭಾಗ ಮಟ್ಟದ ಸಹಾಯಕ ಜಿಲ್ಲಾ ಆಯುಕ್ತರು ಹಾಗೂ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳ ಹಾಗೂ ಖಜಾಂಚಿಗಳ ಸಮಾವೇಶ



ದಿನಾಂಕ 5.8.2006 ರಂದು ಬೆಂಗಳೂರು ಉತ್ತರ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಬೆಂಗಳೂರು ವಿಭಾಗ ಮಟ್ಟದ ಸಹಾಯಕ ಜಿಲ್ಲಾ ಆಯುಕ್ತರುಗಳು, ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು, ಖಜಾಂಚಿಗಳ ಸಮಾವೇಶ ಕೇಂದ್ರ ಕಛೇರಿಯಲ್ಲಿ ಜರುಗಿತು. ವಿಭಾಗದ ಜಿಲ್ಲೆಗಳಿಂದ 51 ಸದಸ್ಯರು ಭಾಗವಹಿಸಿದ್ದರು. ಶ್ರೀಮತಿ ಗೀತಾ ನಟರಾಜ್, ಜಂಟಿ ರಾಜ್ಯ ಕಾರ್ಯದರ್ಶಿ ಸಮಾವೇಶವನ್ನು ಉದ್ಘಾಟಿಸಿದರು. ಶ್ರೀ ನಾರಾಯಣ ಶೆಟ್ಟಿ, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಎಲ್ಲರನ್ನು ಸ್ವಾಗತಿಸಿದರು. ಶ್ರೀ ಪ್ರೇಮ್‌ಕುಮಾರ್, ಶ್ರೀಮತಿ ರಾಮಲತ, ಜಿಲ್ಲಾ ಆಯುಕ್ತರುಗಳು ಮತ್ತು ಇತರ ಪದಾಧಿಕಾರಿಗಳು ಉಪಸ್ಥಿತರಿದ್ದರು.

2006-07ನೇ ಸಾಲಿನ ಚಟುವಟಿಕೆಗಳು, ಸ್ಕೌಟ್ಸ್ ಮತ್ತು ಪ್ರಗತಿ ಪರ ಶಿಕ್ಷಣ, ಸಹಾಯಕ ಜಿಲ್ಲಾ ಆಯುಕ್ತರುಗಳ, ಕಾರ್ಯದರ್ಶಿಗಳ ಜವಾಬ್ದಾರಿ ಮತ್ತು ಕರ್ತವ್ಯ, ರಾಜ್ಯ ಹಾಗೂ ರಾಷ್ಟ್ರೀಯ ಸಂಸ್ಥೆ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಲಾಯಿತು.

ಶ್ರೀ ಕೆ. ತಿಮ್ಮಪ್ಪ, ಕೇಂದ್ರ ಸ್ಥಾನಿಕ ಆಯುಕ್ತರು (ಸ್ಕೌಟ್ಸ್ ತರಬೇತಿ), ಶ್ರೀಮತಿ ರವಿ ವೆಸ್ಲಿ, ಕೇಂದ್ರ ಸ್ಥಾನಿಕ ಆಯುಕ್ತರು, (ಕಾರ್ಯಯೋಜನೆ), ಶ್ರೀ ಎಂ.ಎಸ್. ನಟರಾಜ್, ರಾಜ್ಯ ಸಹಾಯಕ ಆಯುಕ್ತರು, ಶ್ರೀಮತಿ ಜಾನಕಿ ವೇಣು ಗೋಪಾಲ್. ಎ.ಎಸ್.ಓ.ಸಿ.(ಗೈಡ್), ಶ್ರೀ ಎಂ.ಎ. ಚಿಲ್ಲಯ್ಯ, ಕೇಂದ್ರ ಸ್ಥಾನಿಕ ಆಯುಕ್ತರು (ಪ್ರಕಟಣೆಗಳು), ಶ್ರೀ ಎ.ಎಂ. ಶಂಕರ್, ಎ.ಎಸ್.ಓ.ಸಿ. (ಎಸ್) ಇವರುಗಳು ಹಲವಾರು ವಿಷಯಗಳ ಬಗ್ಗೆ ಮಾಹಿತಿ ನೀಡಿದರು.

ಮುಕ್ತಾಯ ಸಮಾರಂಭದಲ್ಲಿ ಬೆಂಗಳೂರು ಉತ್ತರ ಜಿಲ್ಲೆಯ ಉಪನಿರ್ದೇಶಕರಾದ ಶ್ರೀ ಎ. ದೇವ ಪ್ರಕಾಶ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು, ಶ್ರೀ ನಾಗರಾಜ್, ನಿವೃತ್ತ ಶಾಲಾ ತನಿಖಾಧಿಕಾರಿಗಳು, ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಶ್ರೀ ಪ್ರೇಮ್‌ಕುಮಾರ್, ಡಿ.ಸಿ. (ಸ್ಕೌಟ್ಸ್)ರವರು ಎಲ್ಲರನ್ನು ಸ್ವಾಗತಿಸಿದರು. ಶ್ರೀ ನಾರಾಯಣ ಶೆಟ್ಟಿ ಸಮಾವೇಶದ ಬಗ್ಗೆ ವರದಿ ಸಲ್ಲಿಸಿದರು. ಶ್ರೀಮತಿ ರಾಮಲತ, ಡಿ.ಸಿ. (ಗೈಡ್ಸ್)ರವರು ಎಲ್ಲರವನ್ನು ವಂದಿಸಿದರು.

ಚಿಂತನ



# ಧರ್ಮ

ಗೊ.ರು. ಚನ್ನಬಸಪ್ಪ

**ಬದುಕು ಎಲ್ಲ ಹೊತ್ತಿಗೆಯಲಿಲ್ಲ, ಹುಗಿದಿಲ್ಲ ದುಡ್ಡಿನಂತೆ**
**ಮಾಡಿದಂತೆ ಅದರಾಟ ಮಾಟ, ಒಟ್ಟಿದರೆ ಗುಡ್ಡದಂತೆ,**
**ಕೈಗೆ ಸಿಕ್ಕೂ ಸಿಗದಂತೆ ಬೂರಲದ ಅರಳೆ ಹೊರಳಿದಂತೆ**
**ಬಟ್ಟ ಬಯಲಲಿ ಗುಟ್ಟನೊಡೆದು ಗಾಳಿಯಲಿ ಹರಡಿದಂತೆ!**

ನಮ್ಮ ನಾಡಿನ ಹಿರಿಯ ಕವಿ ಚನ್ನವೀರ ಕಣವಿ ಅವರ ಕವನವೊಂದರ ಸಾಲುಗಳಿವು. ಬದುಕಿಗೆ ಬರೆದಿರುವ ವ್ಯಾಖ್ಯೆಯಂತಿರುವ ಈ ಸಾಲುಗಳು ಚಿಂತನೆಗೆ ಒಳ್ಳೆಯ ಗ್ರಾಸ ಒದಗಿಸುತ್ತವೆ. ಬದುಕೆಂಬುದು ಪುಸ್ತಕದ ಸಾಹಿತ್ಯವಲ್ಲ; ನೆಲದ ಮರೆಯ ನಿಧಾನವೂ ಅಲ್ಲ. ಅದರ ಆಟಮಾಟಗಳು ನಾವು ನಡೆದಂತೆ. ಅದು ಕೈಗೆ ಸಿಕ್ಕೂ ಸಿಗದ ಪಟ್ಟು; ಬಯಲಲ್ಲಿ ಒಡೆದ ಗುಟ್ಟು.

ಬದುಕಿನ ಬ್ರಹ್ಮ ಮಾನವನೇ ಆದರೂ ಅದನ್ನು ಅವನೇ ಇನ್ನೂ ಅರ್ಥಮಾಡಿಕೊಂಡಿಲ್ಲ. ಅದರ ಬಗೆಗೆ ಅವನು ಇನ್ನೂ ಕುತೂಹಲಿಯಾಗೇ ಇದ್ದಾನೆ. ಅದರ ಹುಟ್ಟು - ಬಟ್ಟೆಗಳನ್ನು ತಿಳಿಯುವ ಅನ್ವೇಷಣೆಯಲ್ಲೇ ಇದ್ದಾನೆ. ಇದು ಮಾನವನು ತನ್ನ ಸೃಷ್ಟಿಯಾದಾಗಿನಿಂದಲೂ ನಡೆಸಿರುವ ಹುಡುಕಾಟ. ಈ ಹುಡುಕಾಟದ ಹಾದಿಯಲ್ಲಿ ತಾನೇ ಕಂಡುಕೊಂಡ ಒಂದು ಸಮಾಧಾನ - ಧರ್ಮ.

ಧರ್ಮ ಎನ್ನುವುದೂ ಅಷ್ಟೆ. ಒಬ್ಬೊಬ್ಬನ ದೃಷ್ಟಿಯಲ್ಲಿ ಒಂದೊಂದು ಧರ್ಮ. ಒಡೆಯನ ಧರ್ಮವೇ ಬೇರೆ, ದುಡಿಯುವವನ ಧರ್ಮವೇ ಬೇರೆ. ಗಂಡಿನ ಧರ್ಮವೇ ಬೇರೆ, ಹೆಣ್ಣಿನ ಧರ್ಮವೇ ಬೇರೆ. ಹಾಗೆಯೇ ಮಕ್ಕಳು - ಮುದುಕರ ಧರ್ಮ. ಆದರೆ ಮನುಕುಲದ ಇತಿಹಾಸವನ್ನು ಸೂಕ್ಷ್ಮವಾಗಿ ಗಮನಿಸಿದರೆ ಈ ಧರ್ಮ ಎನ್ನುವುದು ಮಾನವನ ಬದುಕಿನಲ್ಲಿ ಕೇವಲ ಸೂತ್ರವಾಗಿ ಉಳಿದಿರುವುದೇ ಹೆಚ್ಚು. ಅದು ಬದುಕಿನ ಪಾತ್ರವಾದುದು ಅಪರೂಪ. ಆದುದರಿಂದಲೇ ಮಾನವ ತಾನೇ ಕಂಡುಕೊಂಡ ಸಮಾಧಾನದ ಸೂತ್ರವಾದರೂ ಅವನಿಗೆ ಅದು ಇಂದೂ ಸಮಾಧಾನವನ್ನು ನೀಡಿಲ್ಲ. ವಾಸ್ತವವಾಗಿ ಅದರ ಹೆಸರಿನಲ್ಲೇ ಸಂಬಂಧಗಳನ್ನು ಕಳೆದುಕೊಳ್ಳುತ್ತಿದ್ದಾನೆ. ಒಂದಲ್ಲ ಒಂದು ಕಾರಣದಿಂದ ಅಸಹನೀಯ ಸಂಕಟವನ್ನು ಅನುಭವಿಸುತ್ತಿದ್ದಾನೆ.

ದೂರ ಹೋಗುವುದು ಬೇಡ. ಧರ್ಮದ ತವರು ಎಂದು ಹೇಳಿಕೊಳ್ಳುವ ಭಾರತದ ಇಂದಿನ ಪರಿಸ್ಥಿತಿಯನ್ನೇ ಗಮನಿಸಿ. ಧರ್ಮದ ನೆಪದಲ್ಲೇ

ನಾವು ನಿತ್ಯವೂ ಕತ್ತಲೆಯ ಕೂಪಕ್ಕೆ ಕಾಲಿಡುತ್ತಿದ್ದೇವೆ. ವ್ಯಕ್ತಿ - ವ್ಯಕ್ತಿ ಸಂಬಂಧಕ್ಕೆ ಬೆಂಕಿ ಹಚ್ಚಿ ಹುಚ್ಚರಂತೆ ಕುಣಿಯುತ್ತಿದ್ದೇವೆ. ಇಂದಿನ ರಾಜಕೀಯ ಪಕ್ಷಗಳ ಅವಾಂತರ, ಅಧಿಕಾರ ಹಿಡಿದವರ ಅಮಲಿನ ಆಟ, ಅಧಿಕಾರ ದೊರೆಯದವರ ಪರದಾಟ, ಮತದಾರರ ಗೊಂದಲ, ಉದ್ಯಮಿಗಳ ಒದ್ದಾಟ, ವರ್ತಕರ ಮೋಸ, ಗ್ರಾಹಕರ ಗ್ರಹಣ, ಮುಕ್ತ ಮಾರುಕಟ್ಟೆಯ ಅವಸರ, ಕೇಂದ್ರದ ತಳಮಳ, ರಾಜ್ಯಗಳ ವ್ಯಾಜ್ಯ, ಆರ್ಥಿಕ ಹಗರಣಗಳ ಮಹಾಪೂರ, ಜಾತಿ ಉಪಜಾತಿಗಳ ವಿಭಜನೆ, ಸಮುದಾಯ ಭಾವನೆಯ ಕೊರತೆ, ಸೇವೆಯಲ್ಲಿರುವವರ ಕರ್ತವ್ಯ ಭ್ರಷ್ಟತೆ, ನಿವೃತ್ತರ ನಿರ್ಲಿಪ್ತತೆ, ನಿರುದ್ಯೋಗಿಗಳ ಹತಾಶತೆ, ನಿಸರ್ಗ ಪರಿಸರ ನಾಶ, ಶಿಕ್ಷಣ ಕ್ಷೇತ್ರದ ಅವನತಿ, ನಗರ ಜೀವನದ ದುರ್ಭರತೆ, ಗ್ರಾಮೀಣ ಬದುಕಿನ ನೀರಸತೆ - ಇವುಗಳ ಮೊತ್ತ ನಮ್ಮ ಭಾರತ! ಇದು ವಸ್ತು ಸ್ಥಿತಿ. ಇದೇನೂ ಗುಟ್ಟಿನ ಸಂಗತಿಯಲ್ಲ; ಗಾಳಿಯಲ್ಲಿ ಹರಡಿದ ಗುಟ್ಟು!

ನಾವೀಗ ಒಂದು ರೀತಿಯ ಮೂಕ ಹಿಂಸೆಗೆ ತುತ್ತಾಗಿದ್ದೇವೆ. ದುಗುಡ - ದಿಗ್ಭ್ರಮೆ, ಭಯ-ಸಂಶಯ, ಅವಿಶ್ವಾಸ-ಅಪನಂಬಿಕೆಗಳ ಮುಳ್ಳು ಹಾದಿಯಲ್ಲಿ ನಡೆಯುತ್ತಿದ್ದೇವೆ. ನಮಗೆ ಇಷ್ಟೊಂದು ಸಾಹಿತ್ಯ - ಸಂಸ್ಕೃತಿಗಳ ಪರಂಪರೆಯಿದ್ದರೂ ಸಮುದಾಯ ಜೀವನದಲ್ಲಿ ಏಕೆ ನೆಮ್ಮದಿ ಕಾಣುತ್ತಿಲ್ಲ? ನಮ್ಮನ್ನೆಲ್ಲ ಕಾಪಾಡಬೇಕಾಗಿದ್ದ ಧರ್ಮ ಏನಾಯಿತು? ಧರ್ಮವನ್ನು ನಾವು ರಕ್ಷಿಸಿದರೆ ಅದು ನಮ್ಮನ್ನು ರಕ್ಷಿಸುತ್ತದೆ ಎಂಬುದು ಸುಭಾಷಿತ. ಅಂದರೆ ಧರ್ಮ ರಕ್ಷಣೆಯಲ್ಲಿ ನಾವು ಆಸಕ್ತಿ ವಹಿಸಲಿಲ್ಲವೆ? ನಾವು ರಕ್ಷಿಸಬೇಕಾದ ಧರ್ಮವಾದರೂ ಯಾವುದು? ಹೀಗೆ ನೂರು ಪ್ರಶ್ನೆಗಳು ನಮ್ಮ ಮುಂದೆ ನಿಂತು ಕಾಡುತ್ತವೆ.

ಈ ಬಗ್ಗೆ ನಾವೆಲ್ಲ ಗಂಭೀರವಾಗಿ ವಿಚಾರ ಮಾಡಬೇಕಾಗಿದೆ. 'ಧರ್ಮ' ಎಂಬುದನ್ನು ನಾವು ತಪ್ಪಾಗಿ ತಿಳಿದ ಕಾರಣ, ಸಂದರ್ಭಕ್ಕೆ ತಕ್ಕಂತೆ ಧರ್ಮದ ಸೂತ್ರಗಳನ್ನು ತಿರುಚಿಕೊಂಡು ಬಳಸಿದ ಕಾರಣ, ಪೂಜೆ-ಪೌರೋಹಿತ್ಯಗಳನ್ನೇ ಧರ್ಮವೆಂದು ಭಾವಿಸಿದ ಕಾರಣ ಇಂದಿನ ಎಲ್ಲ ಗೊಂದಲಗಳೂ ಉಂಟಾಗಿರುವುದು.

ಬದುಕಿನ ಮೂಲ ದ್ರವ್ಯವೇ ಧರ್ಮ ಎನ್ನುವುದಾದರೆ ಸಕಲ ಜೀವರಾಶಿಗಳನ್ನೂ ದೇವರೆಂದು ಭಾವಿಸುವ, ಸಮೂಹ ಜೀವನದಲ್ಲಿ ಪರಸ್ಪರ ಪ್ರೇಮ ವಿಶ್ವಾಸದಿಂದ ಬಾಳುವುದೇ ಧರ್ಮವೆಂದು ತಿಳಿಯುವ ಮುಕ್ತ ಮನಸ್ಸು ನಮ್ಮದಾಗಬೇಕು. ಈ ದೃಷ್ಟಿಯಿಂದ ಆತ್ಮ ನಿರೀಕ್ಷಣೆ ಅಗತ್ಯ. ಇರುವ ದೋಷಗಳನ್ನು ನಿವಾರಿಸಿಕೊಂಡು ವ್ಯಕ್ತಿ-ವ್ಯಕ್ತಿ ಸಂಬಂಧವನ್ನು ಬಂಧುರಗೊಳಿಸುವ, ತುಕ್ಕು ಹಿಡಿದು ಅಪಶ್ರುತಿ ನುಡಿಯುತ್ತಿರುವ ಸಮಾಜ ತಂಬೂರಿಯ ತಂತಿಗಳನ್ನು ಸರಿಪಡಿಸಿ ನೆಮ್ಮದಿಯ ಬದುಕಿನ ಮಧುರ ಶ್ರುತಿ ಮೂಡಿಸುವ ಜೀವನಧರ್ಮ ನಮಗಿಂದು ಬೇಕಾಗಿದೆ. ಅಂತಹ ಜೀವನ ಧರ್ಮದಿಂದ ಮಾತ್ರ ಸಭ್ಯ ಹಾಗೂ ಸಹನೆಯ ಸಮಾಜ ನಿರ್ಮಾಣ ಸಾಧ್ಯ. ಇದು ಸ್ವತಂತ್ರ ಭಾರತದ ಮುಂದಿರಬೇಕಾದ ಆದರ್ಶ.

○

# Indian Scout and Guide Fellowship



The Indian Scout & Guide Fellowship had Organised a Programme at Besant Park from 5th to 7th August 2006. To mark the Centenary of Scouting. Sri. V. Raja Raman, Working President, ISGF was the Chief Guest and Inaugurated the Programme. Prof. M. Suryanarayanappa, Sri. N. Chandrasekhar, Sri. T.S. Lucas, Asst. State Commissioners, Smt. Geetha Nataraj, Joint State Secretary, Smt. Janaki Venugopal, State Org. Commissioner (G) and Smt. P. Saroja & Miss Ravi Wesly, Headquarters Commissioners were present at the inaugural function held on 5th August 2006 at the Camp fire Circle.

Sri. M.A.K. Mecci, National Joint Secretary welcomed the Participants. 62 Members participated in the Event. Sri. K.B.C. Nair, Former Director, National Headquarters addressed the participants on the importance of Scouting and its origin with Camp fire Yarn. Prof. M.S. Appa, Asst. State Commissioner also spoke. A Programme on "Fellowship in past 55 years" was chaired by Sri. Sathish Khanna, Vice-President, ISGF.

The Exhibition was inaugurated by Ms. Madhu Kalia organised by the Southern Railway State Bharat Scouts and Guides. The Golden Guild was formed with Members like Sri. K.B.C. Nair, Sri. V.R. Ganathay, Sri. T.S. Lucas, Ms. Kala S. Phadnis, Ms.K.Alamelu, Sri.Sathish Khanna, Sri. R.S. Anbarasan and

Sri. Daljitsen Mahajan, Legal Advisor, National Headquarters as its Chairman.

Sri. T. Prabhakar, State Treasurer released a Special CD on ISGF, Sri. T.S. Lucas spoke on Fellowship and its Constitution, Mrs. Achani, Srilanka addressed the participants. Lt.Col. Vinay Parashar, Commanding Officer, 3 BN NCC was the Chief Guest at the Camp fire. Sri. Kondajji B. Shanmukhappa was the Chief Guest on 7th August 2006. The function held at Bishop Cotton's Boys School. Justice. Sri. A.J. Sadashiva, Former Judge of Karnataka High Court released a Book on "Indian Scouting & Freedom Struggle".

Sri. P.G.R. Sindhia, Former Hon'ble Minister and Vice-President, Bharat Scouts and Guides, Karnataka presided over the function Sri. M.A. Khalid, Member, World Scout Committee & Co-Ordinator, APR Region was also present. Officials of SHQ and DA's were Present Col. John Ellis, Principal of Bishop Cotton's Boys School gave a brief account of Scouting Movement in the School. Sri. V. Kulkarni, Scout Master Co-ordinated the Programme. The closing function was held at the State Headquarters. Sri. Kondajji B. Shanmukhappa, State Chief Commissioner was the Chief Guest, Sri. Suresh Heblikar, State Secretary and other Officials were present. The State Headquarters Hosted a Tea for all the guests and presented a Momento to the participants.

- ಧರ್ಮದಿಂದ ಸಂಪತ್ತು, ಸುಖ ದೊರೆಯುತ್ತದೆ. ಎಲ್ಲ ಇಷ್ಟಾರ್ಥಗಳೂ ಧರ್ಮದಿಂದಲೇ ಲಭಿಸುತ್ತವೆ. ಆದ್ದರಿಂದ ಪ್ರಪಂಚದಲ್ಲಿ ಧರ್ಮವೇ ಶ್ರೇಷ್ಠವಾದುದು. **- ವಾಲ್ಮೀಕಿ ರಾಮಾಯಣ**
- ರಟ್ಟೆ ಮುರಿದು ಸಂಪಾದಿಸಿದ ರೊಟ್ಟಿಯ ರುಚಿ, ದೇವಲೋಕದ ಅಮೃತಕ್ಕೂ ಮಿಗಿಲು. **- ಟಿ.ಪಿ. ಕೈಲಾಸಂ**
- ಚಂದನವಾಗಲಿ, ಜಾಜಿಯಾಗಲಿ, ಕಮಲದ ಹೂ ಆಗಲಿ - ಇವುಗಳೆಲ್ಲದರ ವಾಸನೆಗಿಂತ ಮನುಷ್ಯನ ನಡತೆಯ ಪರಿಮಳವೇ ಹೆಚ್ಚು. **- ಬುದ್ಧ**
- ಯಾರು ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳುತ್ತಾರೋ, ಅವರಿಗೆ ದೇವರೂ ಸಹಾಯ ಮಾಡುತ್ತಾನೆ. **- ಎಸ್. ರಾಧಾಕೃಷ್ಣನ್**
- ಮನುಷ್ಯರಿಗೆ ರೂಪವೇ ಆಭರಣ, ರೂಪಕ್ಕೆ ಗುಣ ಆಭರಣ, ಗುಣಕ್ಕೆ ಜ್ಞಾನ ಆಭರಣ, ಜ್ಞಾನಕ್ಕೆ ಕ್ಷಮೆಯೇ ಭೂಷಣವಾದ ಆಭರಣ. **- ಸುಭಾಷಿತ**
- ಕೋಪದಿಂದ ಕೀರ್ತಿ ನಾಶವಾಗುವುದು, ಕೋಪ ಸಂಪತ್ತನ್ನೂ ಹಾಳು ಮಾಡುತ್ತದೆ. **- ಗರುಡ ಪುರಾಣ**
- ಅಲ್ಪರು ಅದೃಷ್ಟ ಎನ್ನುತ್ತಾರೆ. ಬುದ್ಧಿಶಾಲಿಗಳು ಕಾರ್ಯಕಾರಣಗಳನ್ನು ನಂಬುತ್ತಾರೆ. **- ಬಿ.ಎಂ. ಶ್ರೀಕಂಠಯ್ಯ**
- ಒಬ್ಬ ಮನುಷ್ಯನ ಯೋಗ್ಯತೆಯನ್ನು ಪರೀಕ್ಷಿಸಬೇಕಾದರೆ ಅವನಿಗೆ ಅಧಿಕಾರ ಕೊಟ್ಟು ನೋಡಬೇಕು. **- ಅಬ್ರಹಾಂ ಲಿಂಕನ್**

## Training Courses Conducted by the Districts During June - August 2006 (Scout Wing)

| Sl. No. | District | Place | Date | Course | Participants | Leader |
|---|---|---|---|---|---|---|
| 1. | Bidar | Changalara | 26.6.2006 to 5.7.2006 | Basic Scout Master | 28 | Sri. B.K. Patil, LT(S) |
| 2. | Mysore | Piriyapatna | 26.6.2006 to 5.7.2006 | Basic Scout Master<br>Basic Cub Master | 40<br>18 | Sri K.G. Gopalakrishna, ALT(S)<br>Sri. Jagadish, ALT(C) |
| 3. | Chikmagalur | Chikmagalur | 24.7.2006 to 2.8.2006 | Basic Scout Master | 16 | Sri. Jimmy Squara, ALT(S) |
| 4. | Bidar | Changalara | 31.7.2006 to 7.8.2006 | Basic Scout Master | 12 | Sri. M.R. Patil, ALT(S) |
| | | | 31.7.2006 to 7.8.2006 | Advanced Scout Master | 17 | Dr. Bhara Shetty, ALT(S) |

## Training Courses Conducted by the Districts During June - August 2006 (Guide Wing)

| Sl. No. | District | Place | Date | Course | Participants | Leader |
|---|---|---|---|---|---|---|
| 1. | Mysore | Bettadapura | 26.6.2006 to 2.7.2006 | Basic Flock Leader | 18 | Smt. D. Mary, ALT(B) |
| 2. | Bidar | Changalara | 28.6.2006 to 4.7.2006 | Basic Guide Captain | 20 | Sr. Cinthiya, LT(G) |
| 3. | Chikmagalur | Chikmagalur | 26.7.2006 to 2.8.2006 | Basic Guide Captain | 12 | Smt. K.K. Leela, LT(G) |
| 4. | Bidar | Changalara | 1.8.2006 to 7.8.2006 | Advance Guide Captain | 15 | Smt. Shantha Giriyanna, LT(G) |
| 5. | Dharwad | Dharwad | 16.8.2006 to 22.8.2006 | Advance Guide Captain | 32 | Smt. Prabha Londe, LT(G) |

## Training Courses Conducted by the State Headquarters (Guide Wing)

| Sl. No. | Place | Date | Course | Partici pants | Leader |
|---|---|---|---|---|---|
| 1. | Kondajji | 5th to 11th July 06 | Basic Flock Leader | 39 | Smt. Nirmala Kalshetty, LT(B) |
| 2. | Kondajji | " -do- " | Advance Flock Leader | 12 | Smt. M.N. Nagarathan, ALT(G) |
| 3. | Kondajji | " -do- " | Advance Guide Captain | 32 | Smt. C. Manjula, ALT(G) |
| 4. | Kondajji | " -do- " | Advance Guide Captain | 30 | Smt. K.K. Leela, LT(G) |
| 5. | Kondajji | " -do- " | H.W.B. Course | 23 | Smt. P.C. Mangalore, LT(G) |




**ಗರ್ಲ್‌ಗೈಡ್ ಮಾರ್ಗದರ್ಶಿ :**
ಪ್ರಕಾಶಕರು : ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ
ಮೊದಲನೆಯ ಮುದ್ರಣ : 1996 ಎರಡನೆಯ ಮುದ್ರಣ : 2006
ಪುಟಗಳು : 216
ಬೆಲೆ ರೂ. : 20.00

ಮರುಮುದ್ರಣ ಮಾಡುವ ಸಂದರ್ಭದಲ್ಲಿ ಪರಿಷ್ಕರಿಸಿ, ಇತ್ತೀಚಿನ ಗುರಿ, ನೀತಿ, ನಿಯಮ ಮತ್ತು ಸಂಘಟನೆ (ಎ.ಪಿ.ಆರ್.ಒ.) ಭಾಗ III ರಲ್ಲಿ ಆದ ಬದಲಾವಣೆಗಳನ್ನು ಅಳವಡಿಸಿ, ಗೈಡ್ ಮಕ್ಕಳಿಗೆ ಆಮೂಲಾಗ್ರ ಮಾರ್ಗದರ್ಶನ ನೀಡುವಂತೆ ಈ ಪುಸ್ತಕವನ್ನು ಸಿದ್ಧಗೊಳಿಸಲಾಗಿದೆ. ಈ ಕಾರ್ಯದಲ್ಲಿ ಶ್ರೀಮತಿಯರಾದ ಎಸ್.ಕೆ. ಪ್ರಭಾ, ಎಲ್.ಟಿ.(ಜಿ.), ರವಿ ವೆಸ್ಲಿ, ಎಲ್.ಟಿ.(ಜಿ.), ಬಿ.ಡಿ.ಶಾಂತ, ಎಲ್.ಟಿ.(ಜಿ.), ಇವರುಗಳು ಸಾಕಷ್ಟು ಶ್ರಮಿಸಿರುತ್ತಾರೆ.



## ಜಿಲ್ಲಾ ವಾರ್ತೆ

### ರಾಯಚೂರು ಜಿಲ್ಲೆ

**ವಾರ್ಷಿಕ ಸಮಾವೇಶ :** ಜಿಲ್ಲಾ ಮಟ್ಟದ ವಾರ್ಷಿಕ ಸಮಾವೇಶ ರಾಯಚೂರಿನ ಎಸ್.ಆರ್.ಕೆ. ಬಿ.ಎಡ್. ಕಾಲೇಜು ಆವರಣ ದಲ್ಲಿ ನಡೆಯಿತು. ಮಾಜಿ ಸಚಿವರಾದ ಶ್ರೀ ಮುನಿಯಪ್ಪ ಮುದ್ದಪ್ಪ ಅವರು ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸುತ್ತಾ ಸ್ಕೌಟ್ಸ್ ಗೈಡ್ಸ್ ಚಳವಳಿ ಮಕ್ಕಳಲ್ಲಿ ಶಿಸ್ತು, ಹೃದಯ ವೈಶಾಲ್ಯತೆಯನ್ನು ಹಾಗೂ ಸ್ಪೂರ್ತಿಯನ್ನು ಮೂಡಿಸುತ್ತದೆ, ಚಳವಳಿ ಜಿಲ್ಲೆಯ ಎಲ್ಲಾ ಶಾಲೆಗಳಲ್ಲಿ ಆರಂಭಿಸಬೇಕೆಂದು ಆಶಿಸಿದರು.

ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಜಿ. ದಾನವೇಂದ್ರ, ಮುಖ್ಯ ಅತಿಥಿಗಳಾಗಿ ಮಾತನಾಡುತ್ತಾ ಉತ್ತಮ ಪ್ರಜೆಗಳನ್ನು ವ್ಯಕ್ತಿತ್ವ ವಿಕಾಸವನ್ನು ಸ್ಕೌಟ್ಸ್ ಬೆಳೆಸುವುದರಿಂದ ಸಂಸ್ಥೆ ಶತಮಾನೋತ್ಸವವನ್ನು ಆಚರಿಸುತ್ತಿದೆ ಎಂದರು. ಸ್ವಾಗತವನ್ನು ಜಿಲ್ಲಾ ಆಯುಕ್ತರು ಶ್ರೀ ಆರ್. ನರಸಿಂಹಮೂರ್ತಿ ಮಾಡಿದರು. ಶ್ರೀ ಖಾಜಾಹುಸೇನ ಕಾರ್ಯಕ್ರಮ ನಿರೂಪಿಸಿದರು. ಶ್ರೀ ರಾಮಲಿಂಗಪ್ಪ ವಂದನಾರ್ಪಣೆ ಮಾಡಿದರು.

### ಬೀದರ್ ಜಿಲ್ಲೆ :

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಬೀದರ್‌ನ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ದಿನಾಂಕ 21-05-2006 ರಂದು ನಡೆದ ಪಲ್ಸ್ ಪೋಲಿಯೋ ಲಸಿಕಾ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಜಿಲ್ಲಾ ಆಡಳಿತದ ವತಿಯಿಂದ ಆಯೋಜಿಸಿದ್ದ ಪಲ್ಸ್ ಪೋಲಿಯೋ ರ್‍ಯಾಲಿಯಲ್ಲಿ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್ ಗೈಡ್ಸ್‌ಗಳು ಭಾಗವಹಿಸಿ ಜನ ಜಾಗೃತಿ ಮೂಡಿಸಿದರು.



## ಕೊಪ್ಪಳ ಜಿಲ್ಲೆ



ದಿನಾಂಕ 27-7-2006 ರಂದು ಕೊಪ್ಪಳ ಜಿಲ್ಲಾ ಮಟ್ಟದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಹಿಮಾಲಯ ವುಡ್ ಬ್ಯಾಡ್ಜ್ ಹೋಲ್ಡರ್ಸ್ ಸಮಾವೇಶ ಮತ್ತು ಮುಂದುವರೆದ ತರಬೇತಿ ಪಡೆದವರ ಸ್ಟಡಿ ಸರ್ಕಲ್ ಅನ್ನು ಗಂಗಾವತಿ ತಾಲೂಕಿನ ಜನತಾ ಸೇವಾ ಶಿಕ್ಷಣ ಸಂಸ್ಥೆಯಲ್ಲಿ ನಡೆಸಲಾಯಿತು. ಈ ಕಾರ್ಯಕ್ರಮದಲ್ಲಿ ಜಿಲ್ಲೆಯ 60 ಸ್ಕೌಟರ್ಸ್ ಮತ್ತು ಗೈಡರ್ಸ್ ಹಾಜರಿದ್ದು ಚಳವಳಿಯ ಬಗ್ಗೆ ಚರ್ಚಿಸಲಾಯಿತು.

ಈ ಸಮಾವೇಶದ ಅಧ್ಯಕ್ಷತೆಯನ್ನು ಶ್ರೀ ಹೆಚ್.ಎಂ. ಸಿದ್ದರಾಮಸ್ವಾಮಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್), ವಹಿಸಿದ್ದರು. ಶ್ರೀ ಗಂಗಪ್ಪನವರು, ಗಂಗಾವತಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಜ್ಯೋತಿ ಬೆಳಗಿಸುವುದರೊಂದಿಗೆ ಸಮಾವೇಶ ಉದ್ಘಾಟಿಸಿದರು.

## ಚಿಕ್ಕಮಗಳೂರು ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಿಕ್ಕಮಗಳೂರು ಜಿಲ್ಲಾ ಸಂಸ್ಥೆಯ ವತಿಯಿಂದ ದಿನಾಂಕ 24.7.2006 ರಿಂದ 2.8.2006ರ ವರೆಗೆ ಸುಭಾಷ್ ಚಂದ್ರ ಬೋಸ್ ಜಿಲ್ಲಾ ಆಟದ ಮೈದಾನದಲ್ಲಿ ನಡೆದ ಸ್ಕೌಟರ್ಸ್ - ಗೈಡರ್ಸ್ ಮೂಲ ತರಬೇತಿ ಶಿಬಿರದ ಸಮಾರೋಪ ಸಮಾರಂಭವು ದಿನಾಂಕ 1.8.2006 ರಂದು ಸಂಜೆ ಜಿಲ್ಲಾ ಸಂಸ್ಥೆಯ ಆವರಣದಲ್ಲಿ ನಡೆಯಿತು. ಸಭೆಯ ಅಧ್ಯಕ್ಷತೆಯನ್ನು, ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀಯುತ ಎಂ.ಎನ್. ಷಡಕ್ಷರಿಯವರು ವಹಿಸಿ, ತರಬೇತಿ ಪಡೆದ ಸ್ಕೌಟರ್ಸ್ ಹಾಗೂ ಗೈಡರ್ಸ್‌ಗಳು ಶಾಲೆಯಲ್ಲಿ ಮಕ್ಕಳಿಗೆ ಹೆಚ್ಚಿನ ಜ್ಞಾನದಾನ ಮಾಡಬೇಕೆಂದು ತಿಳಿಸಿದರು.

ತರಬೇತಿ ಶಿಬಿರದ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಚಿಕ್ಕಮಗಳೂರು ಕ್ಷೇತ್ರ ಸಂಪನ್ಮೂಲ ಕೇಂದ್ರದ ಸಂಪನ್ಮೂಲ ವ್ಯಕ್ತಿ ಶ್ರೀ ಸಿ.ಪಿ. ಕೃಷ್ಣೇಗೌಡ ಇವರು ಮಾತನಾಡಿ ಸಮಾಜದ ಪ್ರತಿ ಮಗುವಿಗೂ ಇಂದು ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಣ ಅವಶ್ಯಕವಾಗಿದೆ ಎಂದು ತಿಳಿಸಿದರು. ಸಮಾರಂಭದಲ್ಲಿ ರಾಜ್ಯ ಗೈಡ್ಸ್ ವಿಭಾಗದ ತರಬೇತಿ ಆಯುಕ್ತರಾದ ಶ್ರೀಮತಿ ಕೆ.ಕೆ. ಲೀಲಾ ಹಾಗೂ ಸ್ಕೌಟ್ಸ್ ವಿಭಾಗದ ನಾಯಕರಾಗಿ ಶ್ರೀ ಜಿಮ್ಮಿ

ಸಿಕ್ವೇರ, ಕೊಡಗು ಜಿಲ್ಲೆ, ಇವರುಗಳು ಪಾಲ್ಗೊಂಡಿದ್ದರು, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀಮತಿ ಸಂಧ್ಯಾರಾಣಿ ಹಾಗೂ ಶ್ರೀ ಧರ್ಮೇಗೌಡ, ಸಮೂಹ ಸಂಪನ್ಮೂಲ ವ್ಯಕ್ತಿ, ಇವರು ಶಿಬಿರಾರ್ಥಿಗಳಿಗೆ ಪ್ರಮಾಣ ಪತ್ರ ವಿತರಿಸಿದರು.

## ಉತ್ತರ ಕನ್ನಡ ಜಿಲ್ಲೆ

ಕುಮಟಾ ತಾಲ್ಲೂಕಿನ ಧಾರೇಶ್ವರ ಜನತಾ ವಿದ್ಯಾಲಯದ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ವನ ಮಹೋತ್ಸವ ಆಚರಿಸಿದರು. ಅರಣ್ಯ ಉಪ ಸಂರಕ್ಷಣಾಧಿಕಾರಿಯಾದ ಶ್ರೀ ಬಿ.ಜಿ. ನಾಯಕ ಇವರು ಗಿಡನೆಟ್ಟು ಮಕ್ಕಳನ್ನು ಕುರಿತು ಮಾತನಾಡಿದರು. ವಲಯ ಅರಣ್ಯಾಧಿಕಾರಿಯವರಾದ ಶ್ರೀ ಎಸ್. ವೀರಣ್ಣ ಗೌಡರು ಸಮಾರಂಭದಲ್ಲಿ ಭಾಗವಹಿಸಿದ್ದರು. ಗ್ರಾಮಪಂಚಾಯತಿ ಅಧ್ಯಕ್ಷರಾದ ಶ್ರೀ ಎಂ.ಎಚ್. ನಾಯ್ಕರು ಸಹಭಾಗವಹಿಸಿದ್ದರು. ಮುಖ್ಯ ಶಿಕ್ಷಕರು, ಶಾಲಾ ಶಿಕ್ಷಕರು ಸಮಾರಂಭದಲ್ಲಿ ಭಾಗವಹಿಸಿದರು.

## ಮೈಸೂರು ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಮೈಸೂರು, ಸ್ಥಳೀಯ ಸಂಸ್ಥೆ ಪಿರಿಯಾಪಟ್ಟಣ ಇವರ ಸಹಯೋಗದೊಡನೆ ದಿನಾಂಕ 26.6.2006 ರಿಂದ 2.7.2006ರ ವರೆಗೆ ಫ್ಲಾಕ್ ಲೀಡರ್ ಮೂಲ ತರಬೇತಿಯನ್ನು 26.6.2006 ರಿಂದ 5.7.2006ರ ವರೆಗೆ ಕಬ್ ಮಾಸ್ಟರ್ ಹಾಗೂ ಸ್ಕೌಟ್ಸ್ ಮಾಸ್ಟರ್ ಮೂಲ ತರಬೇತಿಯನ್ನು ಶ್ರೀ ಸಿದ್ದಲಿಂಗೇಶ್ವರ ಕಲ್ಯಾಣ ಮಂಟಪ, ಬೆಟ್ಟದಪುರ, ಪಿರಿಯಾಪಟ್ಟಣ ತಾಲ್ಲೂಕು ಇಲ್ಲಿ ನಡೆಸಲಾಯಿತು. ಜಿಲ್ಲೆಯ ವಿವಿಧ ತಾಲ್ಲೂಕುಗಳಿಂದ ಒಟ್ಟು 77 ಶಿಕ್ಷಕ - ಶಿಕ್ಷಕಿಯರು ತರಬೇತಿ ಹೊಂದಿದರು.

ಫ್ಲಾಕ್ ವಿಭಾಗದ ನಾಯಕಿಯಾಗಿ ಶ್ರೀಮತಿ ಮೇರಿ ಡಿ.ಯವರು ಎ.ಎಲ್.ಟಿ.(ಬಿ), ಕಬ್ ವಿಭಾಗದ ನಾಯಕರಾಗಿ ಶ್ರೀ ಜಗದೀಶ್, ಎ.ಎಲ್.ಟಿ. (ಸಿ), ಡಿ.ಟಿ.ಸಿ.(ಎಸ್) ರವರು, ಮತ್ತು ಸ್ಕೌಟ್ಸ್ ವಿಭಾಗದ ನಾಯಕರಾಗಿ ಶ್ರೀ ಗೋಪಾಲಕೃಷ್ಣ, ಎ.ಎಲ್.ಟಿ. (ಎಸ್), ಡಿ.ಟಿ.ಸಿ. (ಎಸ್), ಮೈಸೂರು ಗ್ರಾಮಾಂತರ ಇವರುಗಳು ಕೆಲಸ ನಿರ್ವಹಿಸಿದರು.



ಉದ್ಘಾಟನಾ ಸಮಾರಂಭವು ದಿನಾಂಕ 27.6.2006 ರಂದು ಸಂಜೆ ಶ್ರೀ ಕೆ.ಸಿ. ಕೃಷ್ಣಪ್ಪ, ಸದಸ್ಯರು, ಜಿಲ್ಲಾ ಪಂಚಾಯತ್, ಬೆಟ್ಟದಪುರ, ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀ ನೀಲಯ್ಯನವರು, ಉಪಾಧ್ಯಕ್ಷರು, ತಾಲ್ಲೂಕು ಪಂಚಾಯತಿ, ಪಿರಿಯಾಪಟ್ಟಣ, ಇವರು ಜ್ಯೋತಿ ಬೆಳಗಿಸಿ, ಉದ್ಘಾಟನೆ ಮಾಡಿದರು. ಶ್ರೀಮತಿ ರತ್ನಮ್ಮನವರು, ಗ್ರಾಮ ಪಂಚಾಯಿತಿ ಅಧ್ಯಕ್ಷರು ಬೆಟ್ಟದಪುರ, ಇವರು ಅತಿಥಿಯಾಗಿ ಆಗಮಿಸಿ ಶುಭ ಹಾರೈಸಿದರು.

ಜಿಲ್ಲಾ ಕಾರ್ಯದರ್ಶಿ ಶ್ರೀ ಅಬ್ದುಲ್ ಜಮೀಲ್‌ರವರು ಸ್ವಾಗತವನ್ನು ಕೋರಿದರು. ಪ್ರಾಸ್ತಾವಿಕ ಭಾಷಣವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಪಿ. ವಿಶ್ವನಾಥ್ ಮಾಡಿದರು, ಡಾ. ರತ್ನ ಅರಸ್, ರಾಜ್ಯ ಸಹಾಯಕ ಆಯುಕ್ತೆ (ಮೈಸೂರು ವಿಭಾಗ) ಇವರು ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು. ಡಾ. ಕಮಲಾರಾಮನ್, ಜಿಲ್ಲಾ ಗೈಡ್ ಆಯುಕ್ತರು, ಶ್ರೀ ಚೆನ್ನಬಸಪ್ಪ, ಸ್ಥಾನಿಕ ಆಯುಕ್ತರು, ಜಿಲ್ಲಾ ಸಹ ಆಯುಕ್ತರಾದ ಶ್ರೀ ಸುರೇಶ್‌ಕುಮಾರ್, ಖಜಾಂಚಿ ಶ್ರೀ ಉಮೇಶ್, ಸಹ ಜಿಲ್ಲಾ ಆಯುಕ್ತರಾದ ಶ್ರೀಮತಿ ರಾಜಶ್ರೀ, ಮಾಜಿ ಕ್ಷೇತ್ರ ಸಮನ್ವಯಾಧಿಕಾರಿ ಶ್ರೀ ಜಗದೀಶ್‌ರವರು ಉಪಸ್ಥಿತರಿದ್ದರು.

ಶ್ರೀ ರಾಮಚಂದ್ರ ರಾಜೇ ಅರಸ್, ಕ್ಷೇತ್ರ ಶಿಕ್ಷಣಾಧಿಕಾರಿಯವರು ಹಾಗೂ ರಾಜ್ಯ ತರಬೇತಿ ಆಯುಕ್ತರಾದ ಶ್ರೀ ಮಾಧವ್ ಸಿಂಗ್, ಶ್ರೀಮತಿ ಕೆ.ಕೆ. ಲೀಲಾರವರು ಶಿಭಿರಕ್ಕೆ ಭೇಟಿ ನೀಡಿದರು.

ಮುಕ್ತಾಯ ಸಮಾರಂಭವು ದಿನಾಂಕ 4.7.2006 ರಂದು ಮಂಗಳವಾರ ಸಂಜೆ ಜಿಲ್ಲಾ ಮುಖ್ಯ ಆಯುಕ್ತರಾದ, ಶ್ರೀ ಪಿ. ವಿಶ್ವನಾಥ್‌ರವರು ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಕೆ.ಬಿ. ಷಣ್ಮುಖಪ್ಪ, ರಾಜ್ಯ ಪ್ರಧಾನ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ತರಬೇತಿ ಪಡೆದ ಶಿಕ್ಷಕ-ಶಿಕ್ಷಕಿಯರುಗಳಿಗೆ ಮಾರ್ಗದರ್ಶ ಮಾಡಿದರು.

ಶ್ರೀಮತಿ ಸರೋಜ ತುಳಸೀದಾಸ್, ರಾಜ್ಯ ಆಯುಕ್ತರು (ಗೈಡ್ಸ್), ಉಚಿತವಾಗಿ ಕಲ್ಯಾಣ ಮಂಟಪವನ್ನು ತರಬೇತಿಗೆ ನೀಡಿರುವ ಶ್ರೀ ತೋಟಪ್ಪ ಶೆಟ್ಟಿ, ಮಾಲೀಕರು, ಸಿದ್ದಲಿಂಗೇಶ್ವರ ಕಲ್ಯಾಣ ಮಂಟಪ, ಬೆಟ್ಟದಪುರ ಇವರಿಗೆ ಸನ್ಮಾನ ಮಾಡಿ ಅಭಿನಂದನಾಪತ್ರ ನೀಡಿ ಅಭಿನಂದಿಸಿದರು.

Bharat Scouts and Guides Mysore North Local Association - Mysore and Crystal Scout Troop, Mysore conducted Essay competition on Leprosy for Scouts and Guides on 22-07-06 at C.S.I. Victoria School, Mysore, The Topic was "How to Create Awareness among people on Leprosy by Scouts and Guides" Secretary North Local Association Sri. H.G. Lakshmi Narayana Rao Welcomed the Guests and the gathering, The Chief Guest and Judge for Essay competition Mr. B.K. Rangaramu, Senior Supervisor Urban leprosy Center, Mysore Inaugurated the Competition and talked on Leprosy Awareness Smt. Prema Latha, ADC presided over the Programme. 90 Scouts and Guides were participated in the event.

## ಶಿವಮೊಗ್ಗ ಜಿಲ್ಲೆ




ದಿನಾಂಕ 27.7.2006 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ ಜಿಲ್ಲಾ ಮಟ್ಟದ ಸರ್ಕಾರಿ ಹಾಗೂ ಮಾನ್ಯತೆ ಪಡೆದ ಅನುದಾನ ರಹಿತ ಪ್ರೌಢ ಶಾಲೆಗಳ ಮುಖ್ಯೋಪಾಧ್ಯಾಯರುಗಳಿಗೆ ಸ್ಕೌಟಿಂಗ್ - ಗೈಡಿಂಗ್ ಬಗ್ಗೆ ಮಾಹಿತಿ ಶಿಬಿರವನ್ನು ಜಿಲ್ಲಾ ಸಂಸ್ಥೆ, ಶಿವಮೊಗ್ಗ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ ಇವರ ಸಂಯುಕ್ತ ಆಶ್ರಯದಲ್ಲಿ ಏರ್ಪಡಿಸಲಾಗಿತ್ತು. ಜಿಲ್ಲಾದ್ಯಂತ 164 ಪ್ರೌಢ ಶಾಲೆಗಳ ಮುಖ್ಯೋಪಾಧ್ಯಾಯರುಗಳು ಮಾಹಿತಿ ಶಿಬಿರದಲ್ಲಿ ಭಾಗವಹಿಸಿದ್ದರು.

ಬೆಳಿಗ್ಗೆ ನೋಂದಣಿ, ಉಪಹಾರ, ಧ್ವಜಾರೋಹಣದಿಂದ ಪ್ರಾರಂಭವಾಗಿ 11.00 ಗಂಟೆಗೆ ಮಾನ್ಯ ಶ್ರೀ ಟಿ.ವಿ. ನಾರಾಯಣಶಾಸ್ತ್ರಿ, ಜಿಲ್ಲಾ ಪ್ರಧಾನ ಆಯುಕ್ತರಿಂದ ದೀಪ ಬೆಳಗಿಸುವ ಮೂಲಕ ಶಿಬಿರ ಉದ್ಘಾಟಿಸಲ್ಪಟ್ಟಿತು. ಮುಖ್ಯ ಅತಿಥಿಗಳಾಗಿ ಶ್ರೀ ಎಸ್.ಎಲ್. ಚವ್ಹಾಣ್, ಉಪಾಧ್ಯಕ್ಷರು, ಜಿಲ್ಲಾ ಸಂಸ್ಥೆ ಮತ್ತು ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ ಇವರು ಜಿಲ್ಲೆಯ ಎಲ್ಲಾ ಪ್ರೌಢ ಶಾಲೆಗಳಲ್ಲಿ ಸ್ಕೌಟ್ - ಗೈಡ್ ದಳಗಳನ್ನು ಕಡ್ಡಾಯವಾಗಿ ಪ್ರಾರಂಭಿಸುವಂತೆ ಮುಖ್ಯೋಪಾಧ್ಯಾಯರಿಗೆ ಸೂಚಿಸಿದರು. ನಂತರ ರಾಜ್ಯ ಸಂಸ್ಥೆಯ ಪ್ರತಿನಿಧಿಯಾಗಿ ಆಗಮಿಸಿದ್ದ ಧಾರವಾಡ ಜಿಲ್ಲಾ ಪ್ರಧಾನ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ, ಎಲ್.ಟಿ. (ಸ್ಕೌಟ್ಸ್)ರವರು ನಾಯಕರಾಗಿ ಶ್ರೀ ಎಂ.ಜಿ. ಶಿವಕುಮಾರ್, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಮತ್ತು ಶ್ರೀ ಟಿ.ಎ. ಮಂಜುನಾಥಾಚಾರ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್)ರವರು ಸಂಪನ್ಮೂಲ ವ್ಯಕ್ತಿಗಳಾಗಿ ಕಾರ್ಯನಿರ್ವಹಿಸಿದರು.

ಸಂಜೆ ನಡೆದ ಮುಕ್ತಾಯ ಸಮಾರಂಭದಲ್ಲಿ ಜಿಲ್ಲೆಯಿಂದ ಆಗಮಿಸಿದ್ದ ಮುಖ್ಯೋಪಾಧ್ಯಾಯರುಗಳ ಪರವಾಗಿ ಶ್ರೀ ಶಿವರಾಮ ಜಿ. ನಾಯಕ್, ಮುಖ್ಯೋಪಾಧ್ಯಾಯರು, ಮಲ್ನಾಡ್ ಪ್ರೌಢಶಾಲೆ, ಶಿಗ್ಗಾ - ಇಂಡುವಳ್ಳಿ, ಸೊರಬ ತಾಲ್ಲೂಕು. ಹಾಗೂ ಮುಖ್ಯೋಪಾಧ್ಯಾಯಿನಿಯವರ ಪರವಾಗಿ ಶ್ರೀಮತಿ ಸತ್ಯವತಿ ಬಿ.ಎನ್., ವಿ.ಸಂ. ಪ್ರೌಢಶಾಲೆ, ನಿಸರಾಣಿ, ಸೊರಬ ತಾಲ್ಲೂಕು ಇವರುಗಳು ಚಳವಳಿಯ ಉಪಯುಕ್ತತೆ ಬಗ್ಗೆ ತಮ್ಮ ಚಿಂತನೆ ಹಂಚಿಕೊಂಡರು.

ದಿನಾಂಕ 31.7.2006 ರಂದು ಜಿಲ್ಲಾ ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವನ್ನು ಜಿಲ್ಲಾ ಸ್ಕೌಟ್ಸ್ ಭವನದಲ್ಲಿ ಬೆಳಿಗ್ಗೆ 10.30 ರಿಂದ ಸಂಜೆ 5.30ರ ವರೆಗೆ ಏರ್ಪಡಿಸಲಾಗಿತ್ತು. ಜಿಲ್ಲೆಯಿಂದ ಒಟ್ಟು 129 ಸ್ಕೌಟರ್ಸ್ - ಗೈಡರ್ಸ್‌ಗಳು ಭಾಗವಹಿಸಿದ್ದರು.

ಬೆಳಿಗ್ಗೆ ಜಿಲ್ಲಾ ಪ್ರಧಾನ ಆಯುಕ್ತರಾದ ಶ್ರೀ ಟಿ.ವಿ. ನಾರಾಯಣಶಾಸ್ತ್ರಿಯವರಿಂದ ದೀಪ ಹಚ್ಚುವುದರ ಮುಖಾಂತರ ಉದ್ಘಾಟಿಸಲ್ಪಟ್ಟಿತ್ತು. ನಂತರ ಸಾರ್ವಜನಿಕ ಶಿಕ್ಷಣ ಇಲಾಖೆಯ ಶಿಕ್ಷಣಾಧಿಕಾರಿಗಳು ಮತ್ತು ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರು (ಗೈಡ್ಸ್), ಶ್ರೀಮತಿ ಸುಮಂಗಳಾರವರು, ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಜಿಲ್ಲೆಯ ಪ್ರತಿ ಶಾಲೆಗಳಲ್ಲೂ ಸ್ಕೌಟ್ಸ್ ಗೈಡ್ಸ್ ದಳಗಳನ್ನು ಪ್ರಾರಂಭಿಸಿ ಕೆಲಸ ಮಾಡಲು ಶಿಕ್ಷಕರಿಗೆ ಕರೆ ನೀಡಿದರು. ಇದೇ ಸಂದರ್ಭದಲ್ಲಿ ಪ್ರೊ. ಎ.ಎಸ್. ಚಂದ್ರಶೇಖರ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್)ರವರು ಭಾಗವಹಿಸಿದ ಶಿಕ್ಷಕರನ್ನು ಕುರಿತು ಪ್ರತೀ ಶಾಲೆಗಳಲ್ಲಿ ಸ್ಕೌಟಿಂಗ್ - ಗೈಡಿಂಗ್ ಪ್ರಾರಂಭಿಸಿ ಪ್ರತಿ ವಾರ ದಳ ಸಭೆಗಳನ್ನು ಸಮವಸ್ತ್ರದೊಂದಿಗೆ ಮಾಡುವಂತೆ ಸೂಚಿಸಿದರು. ನಂತರ ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ಭಾರತಿ ಚಂದ್ರಶೇಖರ್‌ರವರು ಸಹ ಸಭೆಯಲ್ಲಿ ಮಾತನಾಡಿದರು. ಸಮಾವೇಶದಲ್ಲಿ ಸ್ಕೌಟ್-ಗೈಡ್ ಚಳವಳಿಯ ಬೆಳವಣಿಗೆ ಹಾಗೂ ಅನೇಕ ವಿಷಯಗಳ ಬಗ್ಗೆ ಮಾಹಿತಿ ನೀಡಲಾಯಿತು.

ಸಮಾವೇಶದ ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಎಂ.ಜಿ. ಶಿವಕುಮಾರ್, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಅರುಣಮಾಲಾ, ಜಿಲ್ಲಾ ತರಬೇತಿ ಆಯುಕ್ತರು (ಗೈಡ್ಸ್), ಶ್ರೀ ಟಿ.ಎ. ಮಂಜುನಾಥಾಚಾರ್, ಸಹಾಯ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಸಹಕರಿಸಿದರು ಮತ್ತು ಮಲ್ನಾಡ್ ಓಪನ್ ಗ್ರೂಪ್‌ನ ಶ್ರೀ ವೀರೇಶಪ್ಪ, ಕಾರ್ಯದರ್ಶಿ, ಶಿವಮೊಗ್ಗ ಸ್ಥಳೀಯ ಸಂಸ್ಥೆ, ಶ್ರೀ ನೂರ್ ಅಹಮದ್, ಸಹ ಕಾರ್ಯದರ್ಶಿ, ಶಿವಮೊಗ್ಗ, ಸ್ಥಳೀಯ ಸಂಸ್ಥೆ ಇವರು ನೋಂದಣಿ, ಊಟ, ತಿಂಡಿ ವ್ಯವಸ್ಥೆಯನ್ನು ಮಾಡಿದರು.

ಸಂಜೆ ಜರುಗಿದ ಮುಕ್ತಾಯ ಸಮಾರಂಭದಲ್ಲಿ ಪ್ರಧಾನ ಆಯುಕ್ತರಾದ ಶ್ರೀ ಟಿ.ವಿ. ನಾರಾಯಣಶಾಸ್ತ್ರಿಯವರು ಅಧ್ಯಕ್ಷತೆ ವಹಿಸಿದ್ದರು. ಇದೇ ಸಂದರ್ಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್‌ರವರು ಸ್ಕೌಟರ್ಸ್ - ಗೈಡರ್ಸ್‌ಗಳನ್ನು ಕುರಿತು ದಳಗಳನ್ನು ಪ್ರಾರಂಭಿಸುವ ಬಗ್ಗೆ ಹಾಗೂ ನವೀಕರಿಸುವ ಬಗ್ಗೆ ಸಲಹೆ ಸೂಚನೆಗಳನ್ನು ನೀಡಿದರು.

## ಚಿತ್ರದುರ್ಗ ಜಿಲ್ಲೆ

ಚಳ್ಳಕೆರೆ ಪಟ್ಟಣದ ಶ್ರೀ ಸ್ವಾಮಿ ವಿವೇಕಾನಂದ ವಿದ್ಯಾ ಸಂಸ್ಥೆಯಲ್ಲಿ ನಡೆದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಕರ ತಾಲ್ಲೂಕು ಮಟ್ಟದ ಸಮ್ಮೇಳನ ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀಮತಿ ಉಮಾದೇವಿ ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಮ್ಮೇಳನವನ್ನು ಮಾನ್ಯ ಶಾಸಕರ ಧರ್ಮಪತ್ನಿ ಶ್ರೀಮತಿ ಹರ್ಷಿಣಿ ಸುಧಾಕರ್ ಇವರು ಉದ್ಘಾಟಿಸಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ ಶಿಕ್ಷಕರ ಮತ್ತು ಮಕ್ಕಳ ಕಲ್ಯಾಣ ನಿಧಿಯಿಂದ ಪೂರೈಸಲಾಗಿರುವ ಸಮವಸ್ತ್ರಗಳನ್ನು ವಿತರಿಸಿದರು. ಈ ಸಂದರ್ಭದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿದ ಶ್ರೀಯುತ ಕೊಪ್ಪದ್, ತಹಶೀಲ್ದಾರ್ ಇವರು ನೈತಿಕ ಮೌಲ್ಯಗಳು ಕುಸಿಯುತ್ತಿರುವುದರಿಂದ ಜಗತ್ತಿನಲ್ಲಿ ಭಯೋತ್ಪಾದನೆ ತಂಡವಾಡುತ್ತಿದೆ ಎಂದು ಆತಂಕ ವ್ಯಕ್ತ ಪಡಿಸಿ, ಮಕ್ಕಳನ್ನು ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳಲ್ಲಿ ತೊಡಗಿಸಬೇಕು, ಆಗ ಅವರಲ್ಲಿ ಶಿಸ್ತು ಮತ್ತು ರಾಷ್ಟ್ರ ಭಕ್ತಿ ಬೆಳೆಯುತ್ತದೆ ಎಂದು ಅಭಿಪ್ರಾಯ ವ್ಯಕ್ತ ಪಡಿಸಿದರು.



ಸಮಾರಂಭದಲ್ಲಿ ತಾಲ್ಲೂಕು ಪಂಚಾಯಿತಿ ಅಧ್ಯಕ್ಷರಾದ ಶ್ರೀ ಓ. ರಂಗಸ್ವಾಮಿ, ಉಪ ತಹಶೀಲ್ದಾರ್ ನಾಗರಾಜ್, ಜಿಲ್ಲಾ ಪಂಚಾಯಿತಿ ಸದಸ್ಯರಾದ ಶ್ರೀ ರಂಗಸ್ವಾಮಿ, ಸ್ಕೌಟ್ಸ್ ಜಿಲ್ಲಾ ಆಯುಕ್ತರು ಹಾಗೂ ಶ್ರೀ ಸ್ವಾಮಿ ವಿವೇಕಾನಂದ ವಿದ್ಯಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎಂ.ಆರ್. ನಾರಾಯಣಪ್ಪ, ಗೈಡ್ಸ್ ಜಿಲ್ಲಾ ಆಯುಕ್ತರಾದ ಶ್ರೀಮತಿ ಹೇಮಂತಿನಿ ಪ್ರಕಾಶ್, ಜಿಲ್ಲಾ ಪ್ರತಿನಿಧಿಗಳಾದ ಶ್ರೀಮತಿ ಶಶಿಕಲ ರವಿಶಂಕರ್, ಶ್ರೀಮತಿ ಜಯಶೀಲ ಮಹೇಶ್ವರಪ್ಪ, ಶ್ರೀ ಎ. ಧನಪಾಲ್, ಶ್ರೀಮತಿ ಷರಪುನ್ನೀಸಾ ಹಾಗೂ ತಾಲ್ಲೂಕು ದೈಹಿಕ ಶಿಕ್ಷಣ ಸಂಯೋಜಕರಾದ ಶ್ರೀ ತಿಪ್ಪೇಸ್ವಾಮಿ, ಶ್ರೀ ಜನಾರ್ಧನ ರೆಡ್ಡಿ ಎ.ಎಸ್.ಓ.ಸಿ., ಶ್ರೀ ನೂರುಲ್ಲಾ ಇವರು ಉಪಸ್ಥಿತರಿದ್ದರು.

## ಬೆಳಗಾವಿ ಜಿಲ್ಲೆ

ದಿನಾಂಕ 22.7.2006 ರಂದು ಬಸವ ಕಲ್ಯಾಣ ಮಂಟಪ - ಬೈಲಹೊಂಗಲ ಇಲ್ಲಿ ಬೈಲಹೊಂಗಲ ತಾಲ್ಲೂಕಿನ 350 ಶಿಕ್ಷಕ - ಶಿಕ್ಷಕಿಯರಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಣದ ಮಾಹಿತಿ ಶಿಬಿರವನ್ನು ನಡೆಸಲಾಯಿತು. ಈ ಶಿಬಿರದ ನೇತೃತ್ವವನ್ನು ಶ್ರೀ ಡಿ.ಎಂ. ದಾಸಪ್ಪಗೋಳ ಕ್ಷೇತ್ರ, ಶಿಕ್ಷಣಾಧಿಕಾರಿಗಳು, ಬೈಲಹೊಂಗಲ ವಹಿಸಿದ್ದರು. ಶ್ರೀ ನಾಗೇಶ್ ಆರ್. ಶಿವಪೂರ, ಎ.ಎಸ್.ಓ.ಸಿ. ಬೆಳಗಾವಿ ಇವರು ನಾಯಕರಾಗಿದ್ದರು.

ಶ್ರೀಮತಿ ಲಕ್ಷ್ಮೀಮಂಗಿ, ಶ್ರೀಮತಿ ಜೆ.ಬಿ. ಕೌಜಲಗಿ, ಶ್ರೀ ಆರ್.ಎಸ್. ಕಾಕಡೆ, ಶ್ರೀ ಎಸ್.ಎಸ್. ಬಳಿಗಾರ, ಶ್ರೀ ಬಿ.ಜಿ. ಹುಬ್ಬಳ್ಳಿ ಇವರು ಸಹಾಯಕರಾಗಿ ಕಾರ್ಯನಿರ್ವಹಿಸಿದರು.

ಶ್ರೀ ಖನ್ನಿ ನಾಯ್ಕ, ಶ್ರೀ ನಡಾಫ್, ಶ್ರೀ ವಾಲಿ, ಶ್ರೀ ಅಸುಂಡಿ ಹಾಗೂ ಇತರ ಸರ್ಕಾರಿ ಶಿಕ್ಷಣ ಇಲಾಖೆಯ, ಬೈಲಹೊಂಗಲ ವಲಯದ ಶಿಕ್ಷಣ ಸಂಯೋಜಕರು ಮತ್ತು ವಲಯದ ಪ್ರಾಥಮಿಕ ಶಾಲೆಯ ಪ್ರಧಾನ ಗುರುಗಳು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

ದಿನಾಂಕ 10.7.2006 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ ಬೆಳಗಾವಿ ಜಿಲ್ಲೆಯ ಎಲ್ಲಾ ತಾಲೂಕಿನ ಸ್ಥಳೀಯ ಸಂಸ್ಥೆಗಳ ಕಾರ್ಯದರ್ಶಿಗಳು, ಖಜಾಂಚಿಗಳು ಹಾಗೂ ಹಿಮಾಲಯ ವುಡ್‌ಬ್ಯಾಡ್ಜ್ ತರಬೇತಿ ಪಡೆದ ಶಿಕ್ಷಕರ ಸಮಾವೇಶ ಏರ್ಪಡಿಲಾಗಿತ್ತು. ಸಭೆಯ ಅಧ್ಯಕ್ಷತೆ ವಹಿಸಿದ ಜಿಲ್ಲಾ ಮುಖ್ಯ ಆಯುಕ್ತರಾದ

ಶ್ರೀ ವಸಂತ ಜಿ. ಕುಲಕರ್ಣಿಯವರು ಜಿಲ್ಲೆಯ ಪ್ರತಿಯೊಂದು ತಾಲೂಕಿನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳು ಹೆಚ್ಚಾಗಬೇಕು ಎಂದು ಪ್ರಾರ್ಥಿಸಿದರು. ಸಮಾವೇಶದಲ್ಲಿ ಜಿಲ್ಲಾ ಖಜಾಂಚಿಯಾದ ಶ್ರೀ ಎ.ಬಿ. ಶಾನಭಾಗ್ ಉಪಸ್ಥಿತರಿದ್ದರು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಬಿ.ಆರ್. ನಾಯ್ಕರ ಎಲ್ಲರನ್ನು ಸ್ವಾಗತಿಸಿದರು. ಶ್ರೀ ಎಲ್.ಬಿ. ಕಮ್ಮಾರ ವಂದಿಸಿದರು. ಶ್ರೀ ನಾಗೇಶ್ ಆರ್. ಶಿವಾಪೂರ, ಕಾರ್ಯಕ್ರಮ ನಿರೂಪಿಸಿದರು.

## BANGALORE NORTH

Shivajinagar Local Association had Organised a Special Programme on Visibility of Scouting and Guiding at St.Francis Xavier High School, Fraser Town on i 1th August 2006. Sri. Kondajji B. Shanmukhappa, State Chief Commissioner released the Special souvenir brought out on the occasion and appreciated the Shivajinagar Local Association for their activeness in involving many persons in the Movement and introducing the Activities in more Schools in the Area.

Sri. A. Devaprakash, Deputy Director of Public Instruction, Bangalore North and District Chief Commissioner presided over the function. In his presidential address he appealed to every one to extend their Support to the Movement and to introduce Scouting / Guiding in more Schools including the Government Schools in the District. Smt. Saroja Tulasidas Dasappa, State Commissioner (G), Dr. C.M. Balakrishnan, Pediatrician, St. Martha's Hospital were present on the occasion. Sri. T.S. Lucas, Asst. State Commissioner (P&D), Chairman, Local Association, Smt. Geetha Nataraj, Joint State Secretary, Miss. Rathnanjali Nicodemus and the Office bearers of the State, District and Local Associations were also present.

Miss. Rathnanjali Nicodemus, Sr. Josephine Hoover, Mrs. Florence Neil and Mrs. Mercy, Unit Leaders were felicitated. Children from R.T.C. Higher Primary School, Sri Cauvery School, Chinmaya School and St. John's High School presented Cultural Programmes. Smt. B. Revathy, LT(B), Sri. Jai Pinto, Secretary Co-ordinated the Programme

## PATROL LEADERS / SIXERS CAMP

Patrol Leaders and Sixers Camp was held at St.Aloysices Higher Primary School on 22nd July 2006. Rev. Fr. Moses, Vice-President, Local Association Inaugurated the Camp. 150 Cubs, Bulbuls, Scouts and Guides attended the Camp.




**ದಕ್ಷಿಣ ಕನ್ನಡ : ರಾಜ್ಯ ಪುರಸ್ಕಾರ ಸ್ಕೌಟ್ಸ್ ಪೂರ್ವಸಿದ್ಧತಾ ತರಬೇತಿ ಶಿಬಿರ -** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ದಕ್ಷಿಣ ಕನ್ನಡ ಜಿಲ್ಲೆಯ ರಾಜ್ಯ ಪುರಸ್ಕಾರ ಸ್ಕೌಟ್ಸ್ ಪೂರ್ವಸಿದ್ಧತಾ ತರಬೇತಿ ಶಿಬಿರವನ್ನು ದಿನಾಂಕ 1.7.2006 ರಿಂದ 3.7.2006ರ ವರೆಗೆ ಜಿಲ್ಲಾ ಸ್ಕೌಟ್ಸ್ ಗೈಡ್ಸ್ ತರಬೇತಿ ಕೇಂದ್ರ, ಪಿಲಿಕುಳ, ಮಂಗಳೂರು ತಾಲೂಕು ಇಲ್ಲಿ ಸಂಘಟಿಸಲಾಯಿತು. ಜಿಲ್ಲೆಯ ವಿವಿಧ ತಾಲೂಕುಗಳಿಂದ ಒಟ್ಟು 72 ಸ್ಕೌಟ್ಸ್ ವಿದ್ಯಾರ್ಥಿಗಳು ಭಾಗವಹಿಸಿದ್ದರು.

**ಮಂಗಳೂರು ನಗರ ಮತ್ತು ತಾಲೂಕಿನ ರಾಜ್ಯ ಪುರಸ್ಕಾರ ಗೈಡ್ಸ್ ಪೂರ್ವಸಿದ್ಧತಾ ತರಬೇತಿ ಶಿಬಿರ :** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮಂಗಳೂರು ನಗರ ಮತ್ತು ಮಂಗಳೂರು ತಾಲೂಕಿನ ರಾಜ್ಯ ಪುರಸ್ಕಾರ ಗೈಡ್ಸ್ ಪೂರ್ವ ಸಿದ್ದತಾ ತರಬೇತಿ ಶಿಬಿರವನ್ನು ದಿನಾಂಕ 14 ಮತ್ತು 15 ಜುಲೈ 2006ರ ವರೆಗೆ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ, ಪಿಲಿಕುಳ, ಮಂಗಳೂರು ಇಲ್ಲಿ ಸಂಘಟಿಸಲಾಯಿತು. ಒಟ್ಟು 103 ಗೈಡ್ಸ್ ವಿದ್ಯಾರ್ಥಿಗಳು ಶಿಬಿರದಲ್ಲಿ ಭಾಗವಹಿಸಿದ್ದರು. ಸುಳ್ಯ, ಪುತ್ತೂರು, ಬಂಟ್ವಾಳ, ಬೆಳ್ತಂಗಡಿ ತಾಲೂಕಿನ ರಾಜ್ಯ ಪುರಸ್ಕಾರ ಗೈಡ್ಸ್ ಪೂರ್ವ ಸಿದ್ದತಾ ತರಬೇತಿ ಶಿಬಿರವನ್ನು ದಿನಾಂಕ 22.7.2006 ರಿಂದ 24.7.2006ರ ವರೆಗೆ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಉಪ್ಪಿನಂಗಡಿಯಲ್ಲಿ ಸಂಘಟಿಸಲಾಯಿತು. ಶಿಬಿರದ ನಾಯಕಿಯಾಗಿ ಶ್ರೀಮತಿ ಶೈಲಿ ಪ್ರಭಾಕರ್, ಕು|| ಪ್ರಫುಲ್ಲಾ, ಶ್ರೀಮತಿ ಪ್ರೇಮಲತಾ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮೂಡಬಿದ್ರೆ ಸ್ಥಳೀಯ ಸಂಸ್ಥೆಗೊಳಪಡುವ ಶಾಲೆಗಳ ರಾಜ್ಯ ಪುರಸ್ಕಾರ ಸ್ಕೌಟ್ಸ್ - ಗೈಡ್ಸ್ ಪೂರ್ವ ಸಿದ್ದತಾ ತರಬೇತಿ ಶಿಬಿರವನ್ನು ದಿನಾಂಕ 22.7.2006 ರಿಂದ 24.7.2006ರ ವರೆಗೆ ಸರ್ವೋದಯ ಪ್ರೌಢಶಾಲೆ ಮುಂಡ್ಕೂರು ಇಲ್ಲಿ ಸಂಘಟಿಸಲಾಯಿತು.

**ರೋವರ್ ಲೀಡರ್ಸ್ - ರೇಂಜರ್ ಲೀಡರ್ಸ್ ಸಾಮಾನ್ಯ ಮಾಹಿತಿ ಶಿಬಿರ :** ಮಂಗಳೂರು ವಿಶ್ವವಿದ್ಯಾನಿಲಯದ ಪ್ರಥಮ ದರ್ಜೆ ಕಾಲೇಜಿನ ಪ್ರಾಧ್ಯಾಪಕರುಗಳಿಗೆ ರೋವರಿಂಗ್-ರೇಂಜರಿಂಗ್ ಬಗ್ಗೆ ಸಾಮಾನ್ಯ ಮಾಹಿತಿ ಶಿಬಿರವನ್ನು ದಿನಾಂಕ 20.7.2006 ರಂದು ಜಿಲ್ಲಾ ಸ್ಕೌಟ್ಸ್ - ಗೈಡ್ಸ್ ಭವನ, ಮಂಗಳೂರು ಇಲ್ಲಿ ಸಂಘಟಿಸಲಾಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ.ಎ. ಕೈರನ್ನ ಶಿಬಿರವನ್ನು ಉದ್ಘಾಟಿಸಿದರು.

ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಕುಡ್ವಿ ಜಗದೀಶ್ ಶೆಣೈ, ಶಿಬಿರದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ರಾಮಶೇಷ ಶೆಟ್ಟಿ ಮಾತನಾಡಿ. ಶಿಕ್ಷಣದ ಜೊತೆಗೆ ಗುಣ ನಡತೆ ಉತ್ತಮವಾಗಬೇಕು ಇದಕ್ಕೆ ರೋವರ್-ರೇಂಜರ್ ಶಿಕ್ಷಣ ಪೂರಕವಾಗಿದೆ ಎಂದು ತಿಳಿಸಿದರು. ಡಾ।। ಮಾಧವ ಭಟ್, ಹೆಚ್.ಡಬ್ಲ್ಯೂ.ಬಿ(ಆರ್) ಶಿಬಿರದ ನಾಯಕರಾಗಿ ಕರ್ತವ್ಯ ನಿರ್ವಹಿಸಿ ಶಿಬಿರದ ಮುನ್ನೋಟ ನೀಡಿದರು. ಎಂ. ಪ್ರಭಾಕರ್ ಭಟ್, ಸ್ವಾಗತಿಸಿದರು. ರೇಂಜರ್ ಲೀಡರ್ ಡಾ।। ಇಂದಿರಮ್ಮ ಶ್ರೀ ಹಸನ್ ಸಾಹೇಬ್ ವೇದಿಕೆಯಲ್ಲಿ ಉಪಸ್ಥಿತರಿದ್ದರು. ತರಬೇತಿಯಲ್ಲಿ 22 ಉಪನ್ಯಾಸಕರು ಭಾಗವಹಿಸಿದ್ದರು. ಶ್ರೀ ಯು. ಗೋಪಾಕೃಷ್ಣ ಭಟ್, ಎಲ್.ಟಿ.(ಎಸ್) ಸಂಪನ್ಮೂಲ ವ್ಯಕ್ತಿಯಾಗಿ ಸಹಕರಿಸಿದರು. ಶಿಬಿರದ ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ಐರಿನ್ ಡಿ'ಕುನ್ಹ ಅತಿಥಿಗಳಾಗಿ ಭಾಗವಹಿಸಿದರು.

## O Lord Grant Me



*The Truthfulness of Sri Rama*
*The Divine Love of Sri Krishna*
*The Brotherhood of Porphet Mohammed*
*The Forgiveness of Jesus Christ*
*The Kayaka Philosophy of Mahatma Basaveshwara*
*The Brain of Sree Shankara*
*The Heart of Sree Mahaveer*
*The Purity of Sree Zoroaster*
*The Divine wreklessness of Swami Ramathirta*
*The Fearlessness of Swami Vivekananda*
*The Non-Violence of Mahatma Gandhi*

Collection : M.A. CHELLAIAH

# ನಿಮಗೇಕೆ ನೀರಿನ ಸಮಸ್ಯೆ ?

**ಕುಡಿಯುವ ನೀರಿನ ಸಮಸ್ಯೆ ಹೆಚ್ಚು ಕಾಡುತ್ತಿರುವುದು ಬಡ ಮತ್ತು ಅಭಿವೃದ್ಧಿ ಹೊಂದುತ್ತಿರುವ ದೇಶಗಳನ್ನು - ಅದರಲ್ಲೂ ಮುಖ್ಯವಾಗಿ ಹಳ್ಳಿಯ ಜನರನ್ನು ಇಂತಹ ದೇಶಗಳಲ್ಲಿ ವಾಸಿಸುವ 60 ರಿಂದ 70 ಪ್ರತಿಶತಃ ಹಳ್ಳಿಯ ಜನ, ಇವತ್ತಿಗೂ ಶುದ್ಧ ಕುಡಿಯುವ ನೀರನ್ನು ಸೇವಿಸುತ್ತಿಲ್ಲ!**

ಹೊಸ ನೀರನ್ನು ಸೃಷ್ಟಿಸಲು ಸಾಧ್ಯವೇ ಇಲ್ಲ ಎನ್ನುವುದು ನಮಗೆ ಗೊತ್ತಿದೆ. ಹೊಸ ನೀರನ್ನು ಸೃಷ್ಟಿಸಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ನೀರನ್ನು ನಾಶಮಾಡುವುದೂ ಸಹ ನಮ್ಮಿಂದ ಸಾಧ್ಯವಿಲ್ಲ! ಭೂಮಿಯ ಮೇಲಿನ ನೀರಿನ ಪ್ರಮಾಣ ಮೊದಲು ಎಷ್ಟಿತ್ತೋ ಈಗಲೂ ಅಷ್ಟೇ ಇದೆ. ಮುಂದೆಯೂ ಇಷ್ಟೇ ಇರುತ್ತದೆ. ನಾವು ಉಪಯೋಗಿಸಿದ ಪ್ರತಿಯೊಂದು ಹನಿ ನೀರೂ ಸಹ ಯಾವುದೋ ರೀತಿಯಲ್ಲಿ ತಿರುಗಿ ನಿಸರ್ಗವನ್ನೇ ಸೇರುತ್ತದೆ.

ಆದರೂ ನಮಗೀಗ ನೀರಿನ ಸಮಸ್ಯೆ ತಲೆದೋರಿರುವುದು ನಿಜ!

ನೀರನ್ನು ನಾಶಮಾಡಲು ಸಾಧ್ಯವಿಲ್ಲ ಎಂದ ಮೇಲೆ ನೀರಿನ ಸಮಸ್ಯೆ ಏಕೆ ತಲೆದೋರುತ್ತದೆ? ಭೂಮಿಯ ಮೇಲಿನ ನೀರಿನ ಪ್ರಮಾಣ ಯಾವಾಗಲೂ ಒಂದೇ ರೀತಿ ಇರುತ್ತದೆ ಎಂದಾದರೆ, ಬರಗಾಲ ಯಾಕೆ ಬರುತ್ತದೆ? ಕೆರೆ, ಭಾವಿಗಳಲ್ಲಿ ಬತ್ತಿಹೋದ ನೀರು ಎಲ್ಲಿಗೆ ಹೋಗುತ್ತದೆ? ಪ್ರಶ್ನೆಗಳು ಏಳುವುದು ಸಹಜ.

ನೀರನ್ನು ನಾಶಮಾಡಲು ಸಾಧ್ಯವಾಗದಿದ್ದರೂ, ನೀರಿನ ಸಮಸ್ಯೆ ನಮ್ಮನ್ನು ಕಾಡುತ್ತಿರುವುದು ನಿಜ. ಗಮನಿಸಬೇಕಾದ ವಿಷಯವೆಂದರೆ, ನಮ್ಮನ್ನು ಕಾಡುತ್ತಿರುವುದು ನೀರು ಖಾಲಿಯಾಗುತ್ತಿರುವ ಸಮಸ್ಯೆಯಲ್ಲ. ನೀರಿನ ಅಸಮರ್ಪಕ ವಿತರಣೆ ಮತ್ತು ಶುದ್ಧ ಕುಡಿಯುವ ನೀರಿನ ಕೊರತೆ, ನಮ್ಮನ್ನು ಕಾಡುತ್ತಿರುವ ಎರಡು ಮುಖ್ಯ ಸಮಸ್ಯೆಗಳು. ಯಾವಾಗ, ಎಲ್ಲಿ ಮತ್ತು ಎಷ್ಟು ನೀರು ಬೇಕು, ಅದು ಸಿಗದೇ ಇರುವುದು ದೊಡ್ಡ ಸಮಸ್ಯೆ.

ಭೂಮಿಯ ಮೇಲೆ ಸಾಕಷ್ಟು ನೀರಿದ್ದರೂ ವಿತರಣೆ ಸಮತೋಲನದಿಂದ ಕೂಡಿಲ್ಲ. ಕೆಲವು ಪ್ರದೇಶಗಳಲ್ಲಿ ಯಾವಾಗಲೂ ಮಳೆ ಆಗುವುದಿಲ್ಲ. ಅವು ವಿಪರೀತ ನೀರಿನ ಸಮಸ್ಯೆಯನ್ನು ಎದುರಿಸಿ ಮರುಭೂಮಿಗಳಾಗಿವೆ. ಇನ್ನು ಕೆಲವು

ಪ್ರದೇಶಗಳಲ್ಲಿ ಯಾವಾಗಲೂ ಮಳೆ. ಉದಾಹರಣೆಗೆ ಅಮೇರಿಕಾದ ಮಳೆ ಕಾಡುಗಳು. ನೀರಿನ ಅಸಮತೋಲನ ವಿತರಣೆಗೆ ಎರಡು ಪ್ರಮುಖ ಕಾರಣಗಳನ್ನು ಹೆಸರಿಸಬಹುದು. ನೈಸರ್ಗಿಕವಾದ ಎಷ್ಟೋ ಕಾರಣಗಳಿಂದ ಹೀಗೆ ನೀರಿನ ಅಸಮತೋಲನ ವಿತರಣೆಯು ಸಾಧ್ಯತೆ ಇದೆ. ಆದರೂ ಪ್ರಮುಖವಾದ ಕಾರಣ ನಾವೇ.

ಮಳೆಯ ವಿತರಣೆ ಸಮತೋಲನದಿಂದ ಕೂಡಿರಲು ಅರಣ್ಯಗಳು ಎಷ್ಟು ಮುಖ್ಯ ಎನ್ನುವುದು ಎಲ್ಲರಿಗೂ ಗೊತ್ತಿದೆ. ಹಿಂದೊಂದು ಕಾಲದಲ್ಲಿ ಎಲ್ಲ ಕಡೆಯೂ ಅರಣ್ಯಗಳ ಹಂಚಿಕೆ ಸಮಾನ ಪ್ರಮಾಣದಲ್ಲಿದ್ದು ಮಳೆಯ ವಿತರಣೆ ಸಹ ಸಮಾನ ಪ್ರಮಾಣದಲ್ಲಿ ಆಗುತ್ತಿತ್ತು. ಆದರೆ ನಿಧಾನವಾಗಿ ಮನುಷ್ಯನ ನಾಗರೀಕತೆ ಬೆಳೆಯತೊಡಗಿತು. ನಾಗರೀಕತೆಗೆ ಅರಣ್ಯ ಬಲಿಯಾಗತೊಡಗಿತು. ತನ್ನ ಪ್ರಗತಿಯು ಬಗ್ಗೆ ಮಾತ್ರ ಯೋಚಿಸುತ್ತಾ ಸ್ವಕೇಂದ್ರಿತ ಆಲೋಚನೆ ಮಾಡಲು ಪ್ರಾರಂಭಿಸಿದ ಮಾನವ, ಬೇಕಾಬಿಟ್ಟಿ ಅರಣ್ಯ ನಾಶಮಾಡತೊಡಗಿದ. ಜೊತೆಗೆ ಆಧುನಿಕತೆಯ ದಾಹವೂ ಸೇರಿಕೊಂಡಾಗ ಅರಣ್ಯಗಳು ಅಕ್ಷರಶಃ ಮಾಯವಾಗತೊಡಗಿದವು. ಅರಣ್ಯಗಳ ಹಂಚಿಕೆಯಲ್ಲಿ ಅಸಮತೋಲನ ಪ್ರಾರಂಭವಾದ ಕೂಡಲೇ ಮಳೆಯ ವಿತರಣೆಯೂ ಅಸಮತೋಲನಗೊಂಡಿತು.

ಅವಿರತವಾಗಿ ಮತ್ತು ಅನಿಯಂತ್ರಿತವಾಗಿ ಬೆಳೆಯುತ್ತಿರುವ ಔದ್ಯಮೀಕರಣದಿಂದಾಗಿ, ನಮ್ಮ ವಾತಾವರಣದಲ್ಲಿ ಏರುಪೇರು ಆಗುತ್ತಿದೆ. ನಮ್ಮ ಭೂಮಿಯ ವಾಯುಗುಣದಲ್ಲಿ ಬದಲಾವಣೆ ಆಗುತ್ತಿದೆ. ಇದರಿಂದಾಗಿ ನಮ್ಮ ಸಸ್ಯಸಂಪತ್ತಿನ ಮೇಲೆ ಕೃಷಿಯ ಮೇಲೆ ಹಾಗೂ ಮುಖ್ಯವಾಗಿ ನೀರಿನ ಮೂಲಗಳ ಮೇಲೆ ಹಲವಾರು ರೀತಿಯ ದುಷ್ಪರಿಣಾಮವಾಗುತ್ತಿದೆ. ಹಿಂದೊಮ್ಮೆ ಉಕ್ಕಿ ಹರಿಯುತ್ತಿದ್ದ ನಂದಿ ಕಣಿವೆಗಳು ಸಣ್ಣ ತೊರೆಗಳಾಗಿವೆ. ಮಳೆ ಪ್ರಮಾಣದಲ್ಲಿ ವ್ಯತ್ಯಾಸವನ್ನು ನೋಡುತ್ತಿದ್ದೇವೆ. ಹಾಗೆಯೇ ನೀರಿಲ್ಲದ ಪ್ರದೇಶದಲ್ಲಿ ಕೊಂಚವೂ ಮಳೆ ಇಲ್ಲ, ನೀರಿರುವ ಕಡೆಗೆಲ್ಲಾ ಅತಿ ಹೆಚ್ಚು ಮಳೆ ಎನ್ನುವ ಪರಿಸ್ಥಿತಿ ನಿರ್ಮಾಣವಾಗುತ್ತಿದೆ.

ಈ ಅನಿಶ್ಚಿತತೆಗೆ ಮಾನವ ಚಟುವಟಿಕೆಗಳೇ ಮುಖ್ಯ ಕಾರಣವೆನ್ನಲಾಗಿದೆ.

ಹೀಗೆ ನೀರಿನ ಅಸಮತೋಲನ ವಿತರಣೆ ನಮಗಿರುವ ಒಂದು ದೊಡ್ಡ ಸಮಸ್ಯೆಯಾದರೆ, ಮತ್ತೂ ಪ್ರಮುಖವಾದ ಹಾಗೂ ಭಯಾನಕವಾದ ಸಮಸ್ಯೆಯೆಂದರೆ ಶುದ್ಧ ಕುಡಿಯುವ ನೀರಿನ ಕೊರತೆ, ಮುಂದಿನ ದಿನಗಳಲ್ಲಿ ಜಗತ್ತನ್ನು ಕಾಡುವ ಅತಿ ದೊಡ್ಡ ಸಮಸ್ಯೆಯೇ ಇದಾಗಲಿದೆ ಎಂದು ಹಲವು ಸಮೀಕ್ಷೆಗಳು ಹೇಳಿವೆ.

ಕೃಪೆ :
'ಇದು ನೀರಿನ ಕಥೆ' - ಇಕೋ ವಾಚ್



School Children from St. Rita Higher Primary School, Mysore & Pragathi Vidya Nikethan School Harohally, Bangalore Rural presented a Cultural Programme at Glass House, Raj Bhavan on 3rd August 2006



Sri D.S. Mahajan, Legal Advisor, BSG, New Delhi addressing at SHQ, Bangalore on 7th August 2006 on the Occasion of the ISGF Programme. Sri V. Raja Raman, Working President ISGF Mrs. M.G. Bopaiah, Vice-President, BSG Karnataka are also Seen.



Sri Kondajji B. Shanmukhappa, SCC, Releasing a Souvenir brought by the Shivajinagar Local Assn., on 11-08-06, at Bangalore. Sri T.S. Lucas, Chairman, LA Miss. Rathnanjali Nicodemus, President Local Assn. Dr. C.M. Balakrishnan, Sri Prem Kumar, DC (S) & others are seen



Scouts & Guides Presenting a Cultural Programme at the 60th Independence Day Celebrations held on 15th August 2006 at State Headquarters, Bangalore.



Scouts & Guides of Janatha Vidhyalaya, Dhareshwar Kumta Taluk, Uttara Kannada Distrct are planting sapplings with the support of the Officials of Forest Depatrment.

60th Independence Day Celebrations held on 15th August 2006 at State Headquarters, Bangalore.



# 60 ನೇ ಸ್ವಾತಂತ್ರ್ಯ ದಿನಾಚರಣೆ

15 ನೇ ಆಗಸ್ಟ್ 2006

## 100 A Hundred years of Promise 2007

Scouting will celebrate its Centenary in 2007

"ಮಧ್ಯ ರಾತ್ರಿ ಗಂಟೆ ಬಾರಿಸುತ್ತಿರುವಾಗ ಸಂಪೂರ್ಣ ಜಗತ್ತೆಲ್ಲಾ ನಿದ್ರಿಸುತ್ತಿರುವಾಗ, ಭಾರತವು ಎಚ್ಚರಗೊಂಡು ತನ್ನ ಮುಕ್ತ ಜೀವನವನ್ನು ಆರಂಭಿಸಿದೆ...ಇಂತಹ ಒಂದು ಸ್ಮರಣೀಯ ಕ್ಷಣಗಳಲ್ಲಿ ನಾವು ಭಾರತಕ್ಕಾಗಿ ಮತ್ತು ಭಾರತೀಯರಿಗಾಗಿ ಹಾಗೂ ಅದರಲ್ಲೂ ಮುಖ್ಯವಾಗಿ ಸಂಪೂರ್ಣ ಮಾನವತೆಯ ಸೇವೆಗಾಗಿ ಕಂಕಣಬದ್ಧರಾಗೋಣ ಎಂದು ನಾವು ಈ ಮೂಲಕ ಸಂಕಲ್ಪ ಮಾಡಿಕೊಳ್ಳೋಣ..."

- ಪಂಡಿತ್ ಜವಾಹರ್‌ಲಾಲ್ ನೆಹರು
ಆಗಸ್ಟ್ 14, 1947




Regd as News Paper (Magazine) No : **CPMG/KA/BGW-549/2006-08**
Permitted to Post under WPP System
Vide No.: **WPP-87** of SSP, BANGALORE WEST
Posted at: Bangalore City H.P.O. on 30-08-2006

ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

Karnataka Scout & Guide News Magazine

50 ಕರ್ನಾಟಕ

## If not delivered please return to :

**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort
Bangalore - 560 002. Ph:26701227.

***Published for :*** The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.